ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೩ ಜನವರಿ ೨೦೦೭ ಸಂಚಿಕೆ ೧

ಸಂಕ್ರಮಣ ಸಂಚಿಕೆ



ಜಗಜ್ಯೋತಿ ಬಸವೇಶ್ವರರು



ಸಂಕ್ರಾಂತಿ ಹಬ್ಬದ ಹಾರ್ದಿಕ ಶುಭಾಶಯಗಳು



ಲಿಂ. ಶ್ರೀ ಅಟವೀ ಶಿವಯೋಗಿಗಳು



ಲಿಂ. ಶ್ರೀ ಉದ್ಧಾನ ಶಿವಯೋಗಿಗಳು





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೩ ಜನವರಿ ೨೦೦೭ ಸಂಚಿಕೆ : ೧

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ' ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104

## ಒಳಪುಟಗಳಲ್ಲಿ ......................



ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೨೦/- ಆಜೀವ ಸದಸ್ಯತ್ವ ರೂ. ೧೦೦೦/-
ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

ಶರೀರವಿಲ್ಲದ ಅಂಗನೆಗೆ ಅಯಿವರು ಸ್ತ್ರೀಯರು
ಹುಟ್ಟಿದರು ನೋಡಾ
ಆಯಿವರು ಸ್ತ್ರೀಯರ ವಿಲಾಸದಿಂದ
ಅನೇಕ ಕೋಟಿ ಬ್ರಹ್ಮಾಂಡಗಳ ತೋರಿಕೆ ನೋಡಾ
ಪಿಂಡಾಂಡಕ್ಕೆ ತಾವೆ ಅಧಿಷ್ಠಾನ ಕರ್ತೃಗಳಾಗಿಪ್ಪರು
ನೋಡಾ
ಸ್ತ್ರೀಯರೈವರವರವರ ಭಾವಕ್ಕೆ ನೆರೆದು
ಪರಮನೊಬ್ಬ ಪಂಚ ಪುರುಷನಾಗಿಪ್ಪನು ನೋಡಾ.
ಸ್ತ್ರೀಪುರುಷರನೊಳಕೊಂಡು
ಅತಿಶಯವಾದ ಅವಿರಳ ಪರಬ್ರಹ್ಮವೆ ಅನಾದುದ
ಕಂಡು ಬೆರಗಾದೆನು ಕಾಣಾ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೆ.

ಅವಿದ್ಯಾ ಶರೀರ, ವಿಲಕ್ಷಣವಾದ ಚಿಚ್ಛಕ್ತಿ, ಜಗದ್ವೈಭವ, ಲೀಲಾರ್ಥಕಾರಣ. ಪರಾದಿ ಪಂಚಶಕ್ತಿಗಳುದಯ. ಆ ಪಂಚ ಶಕ್ತಿಯರ ಕ್ರಿಯಾವಿನೋದ. ಬಹುಕೋಟಿ ಅಜಾಂಡಗಳ ತೋರಿಕೆ. ಆ ದೇಹ ಜಗತ್ತುಗಳಿಂದ ಕರ್ತೃಗಳಾಗಿರುವ ಕ್ರಿಯಾದಿ ಪಂಚ ಶಕ್ತಿಯರು. ಅವರವರ ಶ್ರದ್ಧಾಭಕ್ತಿಗೆ ಆಚಾರಾದಿ ಪಂಚಲಿಂಗಸ್ವರೂಪ. ಅವುಗಳಿಂದ ಬೆರೆಸಿರುವ ಮಹಾಲಿಂಗ. ಷಟ್‌ಶಕ್ತಿ ಷಟ್‌ಲಿಂಗಗಳ ಸರ್ವಾಂಗ ಲಿಂಗ. ಅವುಗಳನ್ನು ಕೂಡಿಕೊಂಡಿರುವ ಅಖಂಡ ವಸ್ತು. ಅದುವೆ ಜ್ಞಾನನೇತ್ರದಿಂದ ನಿರೀಕ್ಷಿಸಿ, ಪರಮಕಾಷ್ಟಸ್ವರೂಪ ನಾದನು ಶಿವಶರಣನು - ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

'ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವನೆ'
ಕಾಲ ಕರ್ಮವಗೆದ್ದ ಶುಭರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಡ ಜಗವ ಜಂಗಮವ ಅಡಿಗಡಿಗೆ ಮಾಡಿದ
ದೃಢಭಕ್ತಿ ಮಣಿಹವ ನಡೆಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತತ್ವ ಚಿಂತನವನೆಲ್ಲ ಸತ್ಯ ಸಾಕಾರಮಾಡಿ
ನಿತ್ಯನುಡಿನಡೆಯಾಗಿ ಅರಳಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆತ್ಮಯೋಗವ ಕಂಡು ಆಡೋ ಮಕ್ಕಳೊಳಗೆ
'ಆನಂದಮಯ ಈ ಜಗವೆಂದ' । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರಿಯು ಕನ್ನಡಿಯೊಳಗೆ ಮೂಡಿ ಬಿಂಬಿಸುವಂತೆ
ಶರಣ ಸಿದ್ಧಾಂತವೆ ರೂಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಜನರಂದು ಕೊಳಬಹುದು' ಹಲವು ಹನ್ನೊಂದು ತೆರ
ಅವರೇನು ಬಲ್ಲರು' ಒಳನೋವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೊತ್ತು ಹುಟ್ಟುವ ಮುನ್ನ ಹೊತ್ತು ಮುಳುಗುವಾಗ
ಹತ್ತೆಂಟು ಭಾರಿ ನೆನೆವೇನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೋಟಿ ಶರಣರ ಕಂಡೆ ನೀ ಮಾಡೋ ಪೂಜೆಯಲಿ
ಸಾಟಿಯಿಲ್ಲದ ದೇವಲೋಕವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುನಿಮ್ಮ ನೆನೆದಾರೆ ಸರಸರನೆ ಪದಬಂದೊ
ಅರಿವಿನೊಳಾಡುವ ಗಿರಿನವಿಲೊ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುತ್ತಮುತ್ತಲಿನವರು ಹೂವು ಮುಳ್ಳಾದರು
ಹಾಲು ಸಕ್ಕರೆಯಾದೆ ಎಲ್ಲರಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





## ಗ್ರಂಥಾವಲೋಕನ

ಗ್ರಂಥಗಳು ಜ್ಞಾನ ಭಂಡಾರಗಳು. ಜ್ಞಾನವಾಹಿನಿಗಳು. ಜ್ಞಾನ ದರ್ಶಕಗಳು ಗ್ರಂಥಾವಲೋಕನದಿಂದ ಮಾನಸಿಕ ನೆಮ್ಮದಿ. ಮೈ ಮನಗಳಿಗೆ ತೃಪ್ತಿ. ನಮಗಂತೂ ಗ್ರಂಥಗಳೆಂದರೆ ಪಂಚ ಪ್ರಾಣ. ಅದರಲ್ಲೂ ಸದ್ಗ್ರಂಥಗಳೆಂದರೆ ಇನ್ನಿಲ್ಲದ ಅಕ್ಕರೆ. ಅವುಗಳನ್ನು ಕ್ಷಣ ಕ್ಷಣಾರ್ಧವೂ ಬಿಟ್ಟಿರದ ನಂಟು. ನಾವು ಬೆಳಗಿನ ವೇಳೆ ೨.೧೫ಕ್ಕೆ ಹಾಸಿಗೆಯಿಂದೇಳುತ್ತೇವೆ. ಎದ್ದ ಮೊದಲು ಹತ್ತಿಪ್ಪತ್ತು ನಿಮಿಷಗಳು ಪುಸ್ತಕಾವಲೋಕನ ದಲ್ಲಿ ಮಗ್ನರಾಗುತ್ತೇವೆ. ಅನಂತರವೇ ನಮ್ಮ ದೈನಂದಿಕಗಳ ಪ್ರಾರಂಭ. ಪೂಜಾ ಪ್ರಸಾದ ಮುಗಿದ ಮೇಲೆ ಕಾರ್ಯಾಲಯದತ್ತ ಮುಖ ಮಾಡುತ್ತೇವೆ. ಕೈಯಲ್ಲಿ ಪುಸ್ತಕ ಗಳಿರುತ್ತವೆ. 'ಪುಸ್ತಕಂ ಹಸ್ತ ಭೂಷಣಂ' ಎನ್ನುತ್ತಾರೆ ಪ್ರಾಜ್ಞರು. ಇನ್ನೂ ಒಂದು ಮಾತು ಹೇಳುತ್ತಾರೆ. ಮೈಮೇಲೆ ಹರಿದ ಬಟ್ಟೆಯಿದ್ದರೂ ಚಿಂತೆಯಿಲ್ಲ ಕೈಯಲ್ಲೊಂದು ಪುಸ್ತಕವಿರಲಿ ಎಂಬುದೇ ಅದು. ಕಾರ್ಯಾಲಯಕ್ಕೆ ಬಂದಾಗಲೂ ನಮ್ಮ ಮೇಜಿನ ಮೇಲೆ ಕಣ್ಣೆದುರಿಗೆ ಪುಸ್ತಕಗಳಿರುವಂತೆ ನೋಡಿಕೊಳ್ಳುತ್ತೇವೆ. ಕಣ್ಣನ್ನು ಅತ್ತಿತ್ತ ಹೊರಳಿಸಿದರೂ ಗ್ರಂಥ ದರ್ಶನವಾಗುವಂತೆ ಪುಸ್ತಕಗಳಿಂದ ಕಾರ್ಯಾಲಯವನ್ನು ಇಟ್ಟುಕೊಂಡಿದ್ದೇವೆ. ಏಕೆಂದರೆ ಕಣ್ಣೆದಿರುಗಿರುವ ಯಾವ ಪುಸ್ತಕವನ್ನು ಓದಬೇಕು? ಓದಿಲ್ಲದಿರುವುದು ಯಾವುದು ? ಹೊಸದಾಗಿ ಬಂದ ಗ್ರಂಥ ಯಾವುದು ? ಎಂದು ಕೇಳಿಕೊಳ್ಳುತ್ತೇವೆ. ಯಾವುದಾದರೂ ಒಂದನ್ನು ಅವಲೋಕಿಸುತ್ತೇವೆ. ಸಾವಿರ ಕಾರ್ಯ ಕಲಾಪಗಳ ನಡುವೆ, ಸಾವಿರಾರು ಭಕ್ತಾಧಿಗಳ ನಡುವೆ ವ್ಯವಹರಿಸುವ ಮಧ್ಯೆ ಬಿಡುವಾಗುವ ಹತ್ತಾರು ನಿಮಿಷಗಳನ್ನು ಗ್ರಂಥಾವಲೋಕನಕ್ಕೆ ಬಳಸಿಕೊಳ್ಳು ತ್ತೇವೆ. ಪ್ರಯಾಣ ಮಾಡುವಾಗ ವಾಹನಗಳಲ್ಲಿ ಪುಸ್ತಕದೊಂದಿಗೆ ಪ್ರಯಾಣಿಸುತ್ತೇನೆ. ಅಲ್ಲಿಯೂ ಓದುತ್ತೇವೆ. ಸಭೆ ಸಮಾರಂಭಗಳಲ್ಲಿ ಭಾಗವಹಿಸಿದಾಗ ನಮ್ಮೊಂದಿಗೆ ಗ್ರಂಥಗಳಿರುತ್ತವೆ. ಅವುಗಳಿದ್ದರೆ ಮನಸ್ಸಿಗೊಂದು ನೆಮ್ಮದಿ. ಅಲ್ಲಿಯೂ ಅವುಗಳ ಮೇಲೆ ಒಳಗೆ ಕಣ್ಣಾಡಿಸುತ್ತೇವೆ. ಮಠದಲ್ಲಿರುವಾಗ ಹೊಲಗದ್ದೆ- ಕಟ್ಟಡ ಕಣಗಳತ್ತ ಹೋದಾಗ ಬಂದಾಗಲೆಲ್ಲ ಪುಸ್ತಕವಿಲ್ಲದೇ ಇರುವುದು ನಮ್ಮಿಂದಾಗುವುದಿಲ್ಲ. ನಮ್ಮ ಪೂಜಾಗೃಹದಲ್ಲಿರುವಾಗಲೂ ಪುಸ್ತಕಗಳಿರುವಂತೆ ನೋಡಿಕೊಳ್ಳುತ್ತೇವೆ. ಮಲಗುವ ಮುಂಚೆ (ಮಲಗುವುದು ರಾತ್ರಿ ೧೧.೩೦ಕ್ಕೆ) ಪುಸ್ತಕಾವಲೋಕನದಲ್ಲಿ ನಿರತರಾಗುತ್ತೇವೆ. ಹಾಗೇ ನಿರತರಾದಾಗಲೇ ನಮಗೆ ನಿದ್ರೆ ಬರುವ ಭಾಗ್ಯ. ಕೆಲವೊಮ್ಮೆ ಮೌನವಾಗಿ ಓದುತ್ತೇವಾದರೆ ಮತ್ತೆ ಕೆಲವೊಮ್ಮೆ ಸುಶಬ್ದವಾಗಿ ಓದಿಕೊಳ್ಳುತ್ತೇವೆ. ಓದುವಾಗ ಮುಖ್ಯಭಾಗಗಳನ್ನು ಸಾಲುಗಳನ್ನು ಗುರುತು ಮಾಡಿಕೊಳ್ಳುತ್ತೇವೆ. ಅಂತಹ ಗುರುತು ಮಾಡಿದ ಭಾಗಗಳನ್ನು ಆಪ್ತರಿಗೆ ಆತ್ಮೀಯವಾಗಿ ತೋರಿಸುತ್ತೇವೆ. ಆಗ ಹರ್ಷಿಸುತ್ತೇವೆ. ಬಲ್ಲವರೊಂದಿಗೆ ಆ ಬಗ್ಗೆ ಸಂವಾದಿಸುತ್ತೇವೆ, ಚರ್ಚಿಸುತ್ತೇವೆ. ಅಭಿಪ್ರಾಯ ತಿಳಿದುಕೊಳ್ಳುತ್ತೇವೆ. ಗ್ರಂಥಾವಲೋಕನದಿಂದ ನಮಗಾಗುವ ಆನಂದ ಅಷ್ಟಿಷ್ಟಲ್ಲ. ಗ್ರಂಥಗಳು ಸನ್ಮಿತ್ರರು. ಗ್ರಂಥಾವಲೋಕನ ಒಂದು ತಪಸ್ಸು. ಅದೊಂದು ಸತ್ಸಂಗ ಯೋಗ. ಅದರಿಂದ ಜೀವನ ಯೋಗದ ಪರಿಪೂರ್ಣ ದರ್ಶನ ಭಾಗ್ಯ.

*

*ಆತ್ಮೀಯರೇ, ನಮಸ್ಕಾರ*

## ಸಂಕ್ರಾಂತಿ ಹಬ್ಬದ ಶುಭಾಶಯಗಳು

ನಿಮ್ಮೊಡನೆ ನನ್ನದೊಂದು ಅನಿಸಿಕೆಯನ್ನಿಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ನಮ್ಮೆಲ್ಲರ ದೇವಪಿತೃ (God Father) ವೆಂಬುದನ್ನು ತಾವೆಲ್ಲರೂ ಒಕ್ಕೊರಲಿನಿಂದ ಒಪ್ಪುತ್ತೀರಿ. ಪೂಜ್ಯರಿಗೀಗ ನೂರು ವರ್ಷಗಳ ಹತ್ತಿರ. ೧-೪-೨೦೦೭ಕ್ಕೆ ನೂರಕ್ಕೆ ಪಾದಾರ್ಪಣ ಮಾಡುತ್ತಿದ್ದಾರೆ. ದೃಢವಾಗಿದ್ದಾರೆ. ಪ್ರಸನ್ನ ತೇಜರಾಗಿದ್ದಾರೆ. ಲೋಕ ವಿಸ್ಮಯಗೊಳ್ಳುವಂತೆ ನಡೆದಿದ್ದಾರೆ. ಶತಮಾನೋತ್ಸವ ೨೦೦೮ರ ಏಪ್ರಿಲ್ ತಿಂಗಳಲ್ಲಿ ಆಯೋಜಿತವಾಗಿದೆ. ಆ ಸಂಬಂಧವಾಗಿ ಯೋಜನೆಗಳು ರೂಪಿತವಾಗುತ್ತಿವೆ. ನಾಡಿನ ಉದಾರ ಮನಸ್ಕರು ಸೇವೆ ಸಲ್ಲಿಸಲು ನಾ ಮುಂದು, ತಾ ಮುಂದೆಂದು ಮುಂದೆ ಬರುತ್ತಿದ್ದಾರೆ. ಶ್ರೀಮಠದ ಹಳೆಯ ವಿದ್ಯಾರ್ಥಿಗಳಾಗಿದ್ದ ಲಿಂ.ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯರವರ ಸುಪುತ್ರರಾದ ಶ್ರೀ ಶ್ರೀಕಂಠಾರಾಧ್ಯರು ಶತಮಾನೋತ್ಸವ ಸ್ಮಾರಕವಾಗಿ ಒಂದು ನೂರಕ್ಕೂ ಹೆಚ್ಚು ಕೊಠಡಿಗಳನ್ನು ಕಟ್ಟಿಸಿ ಕೊಡಲು ಮುಂದೆ ಬಂದಿದ್ದಾರೆ. ಇದರ ಜೊತೆಗೆ ಮತ್ತೊಂದು ಸಂತೋಷವೆಂದರೆ ರಾಜ್ಯದ ಉಪ ಮುಖ್ಯಮಂತ್ರಿಗಳಾಗಿರುವ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪನವರು ನೂರೊಂದು ಕೆ.ಜಿ. ಚಿನ್ನವನ್ನು ಭಕ್ತಾಧಿಗಳಿಂದ ಸಂಗ್ರಹಿಸಿ ಅರ್ಪಿಸಲು ಮುನ್ನಡೆದಿದ್ದಾರೆ. ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳು ಇದೊಂದು ನಮ್ಮ ಜೀವಮಾನದ ಅಪೂರ್ವ ಅವಕಾಶವೆಂದು ತನುಮನಧನಾದಿಗಳಿಂದ ಶತಮಾನೋತ್ಸವ **'ಯುಗದ ಸಿರಿ'** ಯಾಗುವಂತೆ ಆಚರಿಸಲು ನಿರತರಾಗಿದ್ದಾರೆ. ನೂರಾರು ಗ್ರಂಥಗಳ ಪ್ರಕಟಣೆಯ ಯೋಜನೆಗೆ ಸಿದ್ಧವಾಗುತ್ತಿದೆ. ಇದೆಲ್ಲವೂ **'ಯುಗಪುರುಷ'**ರಾದ ಪೂಜ್ಯ ಶ್ರೀಗಳವರ ವ್ಯಕ್ತಿತ್ವಕ್ಕೆ ಒಪ್ಪುವಂತಾಗಬೇಕಾಗಿರುವ ಉತ್ಸವ, ಇದೀಗ ಈ ಬರಲಿರುವ ಶತಮಾನೋತ್ಸವ ಅವಿಸ್ಮರಣೀಯ ಸಮಾರಂಭಕ್ಕೆ ನಿಮ್ಮ ಸೇವೆಯೂ ಅತ್ಯಗತ್ಯ ತಾವು ಹೇಗೆ ಸಹಕರಿಸುತ್ತೀರಿ ಎನ್ನುತ್ತದೆ 'ಸಿದ್ಧಗಂಗಾ'.

ಇನ್ನೊಂದು ಮಾತಿಲ್ಲಿ.

ಪೂಜ್ಯ ಶ್ರೀ ಶ್ರೀಗಳವರು ದಿನಾಂಕ ೦೧-೦೪-೧೯೦೮ರಂದು ಬೆಂಗಳೂರು ಜಿಲ್ಲೆ ಮಾಗಡಿ ತಾಲ್ಲೂಕು ವೀರಾಪುರ ಗ್ರಾಮದಲ್ಲಿ ಜನಿಸಿದರು. ಹರಕರುಣೋದಯವಾದಂತೆ ಶ್ರೀ ಸಿದ್ಧಗಂಗಾ ಮಠದ ಮುಂದೆ ನಾಡಿನೆಲ್ಲೆಡೆ ಮಂಗಳದ ಹೊಂಬೆಳಕು ಚೆಲ್ಲುವರಿಯುತ್ತ ಬಂದಿತು. ಜಂಗಮದ ಜೋಳಿಗೆ ಭಿಕ್ಷೆ ಮಾಡಿ ಲಕ್ಷ ಜನರನ್ನು ಪೊರೆಯುತ್ತ ಮುನ್ನಡೆಯಿತು. ದಿನಾಂಕ ೩-೩-೧೯೩೦ರಿಂದ ಪೂಜ್ಯ ಶ್ರೀ ಗಳವರು ಅನ್ನ, ಅಕ್ಷರ, ಅಭಯ ದಾಸೋಹಗಳ ಮೂಲಕ ಕರ್ನಾಟಕವನ್ನು ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಸುಧಾರಿಸುತ್ತ ಬಂದಿರುವುದು ಸೂರ್ಯ ಸ್ಪಷ್ಟ. ಮಹಾನುಭಾವರ ಉದಯದಿಂದ ನಾಡಿಂದು ಧನ್ಯವೆನಿಸಿದೆ.

ಏಪ್ರಿಲ್ ಒಂದು ಶ್ರೀಮಠದ ಹಳೆಯ ವಿದ್ಯಾರ್ಥಿಗಳಿಗೆ, ಹಿತೈಷಿಗಳಿಗೆ, ಅಭಿಮಾನಿಗಳಿಗೆ ಪರಮ ಪವಿತ್ರ ದಿನ. ಗುರು ಉದಯವಾದ ಪುಣ್ಯದಿನ. ಆ ದಿನವನ್ನು ನಾವೆಲ್ಲ ಸ್ಮರಣೀಯವಾಗುವಂತೆ, ಹಬ್ಬವನ್ನಾಚರಿಸುವ ಪರಿಪಾಠವನ್ನು, ಸತ್ಸಂಪ್ರದಾಯವನ್ನು ಈ ಬರುವ ಏಪ್ರಿಲ್ ಒಂದರಿಂದಲೇ ಆಚರಿಸುವ ಸಂಕಲ್ಪಮಾಡಬೇಕಾಗಿದೆ. ಅಂದು ನಾವು ನಮ್ಮ ನಮ್ಮ ಮನೆಗಳಲ್ಲಿ ಪೂಜ್ಯ ಶ್ರೀಗಳವರ ಭಾವಚಿತ್ರವನ್ನು(ಫೋಟೋ) ಅಲಂಕರಿಸಿ, ಹಬ್ಬದಡಿಗೆಯನ್ನು ಮಾಡಿ ಆಪ್ತೇಷ್ಟರನ್ನು ಆಹ್ವಾನಿಸಿ **'ಗುರುವಿನ ಹಬ್ಬ'** ವನ್ನು ಆಚರಿಸಬೇಕು. ನಾಡಿನ ಸಾಂಸ್ಕೃತಿಕ, ಧಾರ್ಮಿಕ ಇತಿಹಾಸದಲ್ಲಿ ಒಂದು ಪ್ರಮುಖ ದಿನವಾಗುವಂತೆ ನಡೆಸಿಕೊಂಡು ಬರಬೇಕಾಗಿದೆ. ತಾವೆಲ್ಲರೂ ಈ ಸಂಬಂಧವಾಗಿ ಸಕ್ರಿಯಾತ್ಮಕವಾಗಿ ಸಹಕರಿಸುತ್ತೀರೆಂದು 'ಸಿದ್ಧಗಂಗಾ' ಆಶಿಸುತ್ತದೆ.

ಮತ್ತೊಮ್ಮೆ ನಮಸ್ಕಾರ

– ಸಂಪಾದಕ





## ಮಕರ ಸಂಕ್ರಮಣ

– ಟಿ.ಆರ್. ಮಹಾದೇವಯ್ಯ, ೧ನೇ ಮುಖ್ಯರಸ್ತೆ, ನಾಗರಭಾವಿ ೨ನೇಹಂತ, ಬೆಂಗಳೂರು-೫೬೦ ೦೭೨

ನಿಸರ್ಗದ ಮಡಿಲಲ್ಲಿ ಬಾಳುತ್ತಾ, ಅದರ ಏರಿಳಿತಗಳಿಗೆ ಸ್ಪಂದಿಸುವ ಮನುಷ್ಯ ಋತುಮಾನವನ್ನು ಅನುಸರಿಸಿ ಹಬ್ಬ ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದಾನೆ. ಪ್ರತಿವರ್ಷ ಚಳಿಗಾಲ ಕಳೆದು ಬಿಸಿಕಾಲ ಆರಂಭವಾಗುವ ಸಂಧಿಕಾಲದಲ್ಲಿ ಮಕರ ಸಂಕ್ರಮಣ ಬರುತ್ತದೆ. ಇದೊಂದು ಶುಭ ಮುಹೂರ್ತ. ಈ ಪವಿತ್ರ ದಿನ ಸಾಮಾನ್ಯವಾಗಿ ಮಾರ್ಗಶಿರ ಇಲ್ಲವೇ ಪುಷ್ಯಮಾಸಗಳಲ್ಲಿ (ಜನವರಿ ೧೩ ಅಥವಾ ೧೪) ಬರುವುದು. ಸಂಕ್ರಮಣವೆಂಬ ಪದಕ್ಕೆ ನಿಘಂಟಿನಲ್ಲಿ ೧. ಒಟ್ಟಿಗೆ ಹೋಗುವುದು; ಸಹಭಾಗಿತ್ವ ೨. ದಾಟುವಿಕೆ; ಮುಂದುವರಿಯುವಿಕೆ. ೩. ಪರಿವರ್ತನೆ ವ್ಯತ್ಯಾಸ. ೪. ಪರ್ವಕಾಲ; ಸಂಧಿಕಾಲ ಎಂಬ ಅರ್ಥಗಳಿವೆ. ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಯನ್ನು ಪ್ರವೇಶಿಸುವ ಸಂಧಿಕಾಲ ಇದು. ಅಂದಿನಿಂದ ಸೂರ್ಯ ವಿಷುವ ವೃತ್ತದಿಂದ ಪೂರಾ ದಕ್ಷಿಣಕ್ಕೆ ಸಾಗುತ್ತಾನೆ. ಸೂರ್ಯನು ಮಕರರಾಶಿಯನ್ನು ಪ್ರವೇಶಿಸಿ ದಕ್ಷಿಣಾಯನವನ್ನು ಮುಗಿಸಿ ಉತ್ತರಾಯಣವನ್ನು ಪ್ರಾರಂಭಿಸುವ ಮಹಾಪರ್ವದಿನವೇ **ಮಕರ ಸಂಕ್ರಮಣ**. ಮಕರ ಮಾಸವು ಜನವರಿ ೧೩ ಅಥವಾ ೧೪ರಿಂದ ಆರಂಭಗೊಂಡು ಫೆಬ್ರವರಿ ೧೨ ಅಥವಾ ೧೩ನೇ ತಾರೀಖಿನವರೆಗೆ ಇರುತ್ತದೆ.

ಸೂರ್ಯನು ಮಕರ ರಾಶಿಯಲ್ಲಿರುವಾಗ ಸೂರ್ಯೋದಯಕಾಲಕ್ಕೆ ಸ್ನಾನ ಮಾಡಿದರೆ ಸಕಲ ಪಾಪಗಳೂ ನಿವಾರಣೆಯಾಗುತ್ತದೆ ಎಂಬ ನಂಬಿಕೆಯಿದೆ. ಅಂತೆಯೇ ಜನರು ತೀರ್ಥಕ್ಷೇತ್ರಗಳಿಗೋ, ನದಿಗಳ ಬಳಿಗೋ ಹೋಗಿ ಪವಿತ್ರ ಸ್ನಾನ ಮಾಡಿ, ದೇವಸ್ಥಾನಗಳಲ್ಲಿ ಪೂಜೆ ನಡೆಸಿ ಪ್ರಸಾದ ಸೇವಿಸಿ ಬರುತ್ತಾರೆ. ಇದನ್ನು ಸಂಕ್ರಾಂತಿ ಜಳಕ ಎನ್ನುತ್ತಾರೆ. ಇದು ಉತ್ತರ ಕರ್ನಾಟಕದಲ್ಲಿ ಹೆಚ್ಚು ರೂಢಿಯಲ್ಲಿದೆ.

ಸಂಕ್ರಮಣ ಅಥವಾ ಸಂಕ್ರಾಂತಿ ಬರುವ ಸಮಯ ನಿಜವಾಗಿ ಪರ್ವಕಾಲ. ಡಿಸೆಂಬರ್ ತಿಂಗಳಲ್ಲಿ ಆರಂಭವಾಗುವ ಧನುರ್ಮಾಸ ಒಳ್ಳೆಯ ಚಳಿಗಾಲ. ಅದು ತನ್ನೊಂದಿಗೆ ಹಿಮರಾಜನನ್ನು ಕರೆತರುತ್ತದೆ. ಕೊರೆಯುವ ಚಳಿಗೆ ಮನುಷ್ಯನ ದೇಹ ಧನುಸ್ಸಿನ ಆಕಾರವಾಗುವುದಂತೆ! ಧನುರ್ಮಾಸ ಪೂರ್ತಿ ಪೂಜಾದಿಗಳೆಲ್ಲವೂ ಬೆಳಗಿನ ಜಾವದಲ್ಲೇ. ತಣ್ಣೀರು ಸ್ನಾನ, ಬಿಸಿ ಹುಗ್ಗಿಯ ಪ್ರಸಾದ ಈ ಮಾಸದ ವಿಶೇಷ. ಎಲ್ಲಾ ದೇವಸ್ಥಾನಗಳಲ್ಲೂ ವಿಶೇಷ ಪೂಜೆ. ಸ್ವಾದಿಷ್ಟ ನೈವೇದ್ಯ! ಧನುರ್ಮಾಸವನ್ನು ಶೂನ್ಯಮಾಸವೆನ್ನುತ್ತಾರೆ. ಈಗ ಯಾವ ಶುಭಕಾರ್ಯಗಳೂ ನಡೆಯುವುದಿಲ್ಲ. ಆಗ ನಿಂತು ಹೋಗಿದ್ದ ಮದುವೆ, ಮುಂಜಿ ಮೊದಲಾದ ಮಂಗಳ ಕಾರ್ಯಗಳು ಸಂಕ್ರಾಂತಿಯಿಂದ ಆರಂಭವಾಗುತ್ತದೆ.

ಸೂರ್ಯ ಮೇಲೆ ಮೇಲೆ ಬಂದಂತೆ ಚಳಿ ಕಡಿಮೆಯಾಗಿ ಹಿತವಾದ ಬಿಸಿಲು ತಾಕಿದಂತೆ ಜನಜೀವನದಲ್ಲೂ ಕಾವು ಏರಿ ಜಡತೆ ತೊಲಗಿ ನವೋತ್ಸಾಹ ಚಿಮ್ಮುತ್ತದೆ. ಚಳಿಗಾಲದ ಕೊರೆತದಿಂದ ಬರಡಾದ ಪ್ರಕೃತಿಯಲ್ಲೂ ನವ ಚೇತನ ತುಂಬುತ್ತದೆ. ಕೊರಡಾಗಿದ್ದ ಮರಗಿಡ ಬಳ್ಳಿಗಳು ಚಿಗುರಿನಿಂದ ನಲಿದಾಡುತ್ತವೆ. ನಿಸರ್ಗದ ಮಡಿಲಲ್ಲಿ ಹೇಗೋ ಹಾಗೆಯೇ ಮಾನವ ಲೋಕದಲ್ಲೂ ಸಹ ಪರಿವರ್ತನೆ ಕಾಣುತ್ತದೆ. ಚಳಿಯಿಂದ ಮುದಡಿದ್ದ ಮಾನವನ ಮೈಯಲ್ಲೂ ಬಿಸಿ ಹುಟ್ಟಿ ಹೊಸ ಹುರುಪು ಕಾಣಿಸುತ್ತದೆ. ಹೀಗೆ ಸೃಷ್ಟಿಯ ಸೊಬಗಿನ ಬದಲಾವಣೆಯಿಂದ, ಮಾನವ ಜೀವನದ ಪರಿವರ್ತನೆಯ ದೃಷ್ಟಿಯಿಂದ ಈ ಹಬ್ಬಕ್ಕೆ ಮಹತ್ವವಿದೆ.

ಸಂಕ್ರಾಂತಿಯನ್ನು ಎಳ್ಳು ಹಬ್ಬ ಎನ್ನಬಹುದೇನೋ! ಆ ದಿನ ಮನೆ ಮಂದಿಯೆಲ್ಲಾ ಎಳ್ಳು ತೊಡೆದು ಸ್ನಾನ ಮಾಡುತ್ತಾರೆ. ನೆರೆ ಹೊರೆಯವರಿಗೆ, ಎಳ್ಳು ಬೆಲ್ಲ ತಿಂದು ಒಳ್ಳೊಳ್ಳೆ ಮಾತನಾಡೋಣ ಎನ್ನುತ್ತಾರೆ. ಸಂಜೆ ಮಕ್ಕಳ ಪೀಡಾಪರಿಹಾರಕ್ಕೆಂದು ಮನೆಯಲ್ಲಿ ಮಕ್ಕಳನ್ನು ಹಸೆಯಲ್ಲಿ ಕೂರಿಸಿ ಅವರ ತಲೆಯ ಮೇಲೆ ಎಳ್ಳು ಸೂಸಿ, ಎಳ್ಳಾರತಿ ಬೆಳಗುತ್ತಾರೆ.

ಹೆಣ್ಣುಮಕ್ಕಳಿಗೆ ಇದು ಸಂಕ್ರಮದ ಹಬ್ಬ. ಹೆಣ್ಣುಮಕ್ಕಳು ಹೊಸ ಬಟ್ಟೆ ತೊಟ್ಟು ಎಳ್ಳು ಬೆಲ್ಲ ಕಡಲೆ ಬೀಜ ತುಂಬಿದ ಕರಂಡ ಹಿಡಿದು ಎಳ್ಳು ಬೀರಲು ಓಡಾಡುವ ದೃಶ್ಯ, ತಟ್ಟೆಯಲ್ಲಿ ಬಾಳೆಹಣ್ಣು, ಕಬ್ಬಿನ ತುಂಡು, ಎಳ್ಳು-ಬೆಲ್ಲ, ಎಲಚಿ ಹಣ್ಣೂ, ಅಡಿಕೆ-ವೀಳ್ಯದೆಲೆ ತುಂಬಿ, ಅರಿಸಿನ-ಕುಂಕುಮದೊಡನೆ ಮುತ್ತೈದೆಯರಿಗೆ ನೀಡುವ ಹೆಂಗಸರ ಸಂಭ್ರಮ ಎಲ್ಲೆಲ್ಲೂ ಕಾಣುತ್ತದೆ.



ಸಂಕ್ರಮಣವು ದನದ ಹಬ್ಬವೂ ಹೌದು. ಆಗ ಗೋಪೂಜೆ ನಡೆಸುವುದು ರೂಢಿ. ದನಗಳ ಮೈತೊಳೆದು ಕೊಂಬುಗಳಿಗೆ ಬಣ್ಣ ಸವರಿ, ಅದರ ಮೈಮೇಲೆ ಸಬರ ಹಾಕಿ ಅಲಂಕರಿಸಿ ಮೆರವಣಿಗೆ ಮಡಿ ಕಿಚ್ಚು ಹಾಯಿಸುತ್ತಾರೆ. ದನಗಳಿಗೆ ಹುಗ್ಗಿ ತಿನ್ನಿಸಿ ನಲಿದಾಡುತ್ತಾರೆ.

ಉತ್ತರ ಕರ್ನಾಟಕದ ಕಡೆ ಇದು ರೊಟ್ಟಿಹಬ್ಬ, ವಿವಿಧ ರೀತಿಯ ರೊಟ್ಟಿಗಳನ್ನು ತಯಾರಿಸುತ್ತಾರೆ. ಹೋಳಿಗೆ-ತುಪ್ಪವೂ ಕೂಡ ಅಂದಿನ ಊಟದ ಭಾಗವಗಿರುತ್ತದೆ. ಅದು ಸುಗ್ಗಿಯ ಕಾಲವಾದ್ದರಿಂದ ಹೊಸದಾಗಿ ಬಂದ ಧಾನ್ಯಗಳಿಂದ ಅಡುಗೆ ಮಾಡಿ ದೇವರಿಗೆ ನೈವೇದ್ಯ ಸಲ್ಲಿಸಿ ಸಾಮೂಹಿಕವಾಗಿ ಊಟ ಮಾಡುವ ಪದ್ಧತಿಯುಂಟು.

ತಮಿಳರಿಗೆ ಇದೊಂದು ಮಹತ್ವದ ಹಬ್ಬ. ಅವರಿಗೆ ಇದು ಪೊಂಗಲ್ ಹಬ್ಬ ಸಿಹಿ ಮತ್ತು ಕಾರದ ಬೇಳೆಯನ್ನವನ್ನು (ಪೊಂಗಲು) ಮಾಡಿ ದೇವರಿಗೆ ಅರ್ಪಿಸಿ ನಂತರ ಊಟ ಮಾಡುತ್ತಾರೆ.

ಹೀಗೆ ಸಂಕ್ರಮಣ ಜನಜೀವನದಲ್ಲಿ ಹೊಸತನ್ನು ತಂದು ಜನರಲ್ಲಿ ನವೋತ್ಸಾಹ ಚಿಮ್ಮುವಂತೆ ಮಾಡುವ ಹಬ್ಬವಾಗಿದೆ.

**ಎಲ್ಲರಿಗೂ ಸಂಕ್ರಾಂತಿಯ ಶುಭಾಷಯಗಳು**

## ಶ್ರೀವಾಣಿ

**ಒಳ್ಳೆಯದನ್ನು ಮಾಡುವುದಕ್ಕೆ ಶ್ರೀಮಂತರೇ ಆಗಬೇಕಾಗಿಲ್ಲ. ಅಧಿಕಾರ, ಹಣ, ಸ್ಥಾನ-ಮಾನ, ವಿದ್ಯೆ, ಜನಬಲ ಬೇಕಾಗಿಲ್ಲ. ಬೇಕಾಗಿರುವುದು 'ಮನಸ್ಸು', ಸತ್ಯಶುದ್ಧವಾದ ಮನಸ್ಸು. ಅದನ್ನೇ ಪ್ರಾಜ್ಞರು ದೇವರಿಗೆ ನಾವು ಕೊಡಬೇಕಾದ ಕಾಣಿಕೆ ಎಂದರು.**

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳ ಲಾಗುತ್ತಿದೆ. ಈ ಸಮಸ್ಯೆಯನ್ನು ಅರಿತು ಆಜೀವ ಸದಸ್ಯರು ಮುಂದಾಗಿ ಹೆಚ್ಚುವರಿ ಚಂದಾ ೫೦೦ ರೂ. /೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ಆತಂಕವಿಲ್ಲದೆ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

**ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ** ಬಾಕಿ ಆಜೀವ ಚಂದಾವನ್ನು ನಗದು/ ಎಂ.ಒ/ ಚೆಕ್/ ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳುಹಿಸಿ ವಿನಂತಿಸಿಕೊಳ್ಳುತ್ತೇನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

**'ಸಿದ್ಧಗಂಗಾ' ಓದುಗರೇ ಗಮನಿಸಿ, 2007ನೇ ಜನವರಿಯಿಂದ ವಾರ್ಷಿಕಚಂದಾ 120/-ರೂ.ಗೆ ನಿಗದಿ ಮಾಡಿದೆ. ಓದುಗರು ಸಹಕರಿಸಿ ಪ್ರೋತ್ಸಾಹ ನೀಡಬೇಕಾಗಿ ನಮ್ರ ವಿನಂತಿ.**

**-ಪ್ರಕಾಶಕರು**





# ಸುಗ್ಗಿಯ ಸಡಗರದ ಸಂಕ್ರಾಂತಿ

- ಎಚ್.ಎಸ್. ಸಿದ್ಧಗಂಗಪ್ಪ, ೩ನೇ ಅಡ್ಡರಸ್ತೆ, ಕಾವೇರಿ ಬಡಾವಣೆ, ವಿಜಯನಗರ, ಬೆಂಗಳೂರು-೫೬೦ ೦೦೮.

**ಶ**ತಶತಮಾನಗಳಿಂದ ಹಬ್ಬಗಳು ವ್ಯಕ್ತಿಯ ಬದುಕಿನಲ್ಲಿ ಅವಿಭಾಜ್ಯ ಅಂಗಗಳಾಗಿ ಬೆಳೆದು ಬಂದಿವೆ; ಉಳಿದು ಬಂದಿವೆ. ಬಹುತೇಕ ಹಿಂದುಗಳೆಲ್ಲರೂ ಆಚರಿಸುವ ಯುಗಾದಿ, ಗೌರಿ-ಗಣೇಶ, ವಿಜಯದಶಮಿ, ದೀಪಾವಳಿ, ಮಹಾಶಿವರಾತ್ರಿ ಹಬ್ಬಗಳ ಸಾಲಿನಲ್ಲಿ ಬರುವ ಮತ್ತೊಂದು ವಿಶಿಷ್ಟವಾದ ಹಬ್ಬ ಮಕರ ಸಂಕ್ರಾಂತಿ. ಇದನ್ನು **'ಉತ್ತರಾಯಣ ಪುಣ್ಯಕಾಲ' 'ದೇವಾಯನ ಕಾಲ'** ಎಂದು ಕರೆಯುತ್ತಾರೆ. **'ಸಂಕ್ರಾಂತಿ'** ಎಂದರೆ ಉಜ್ವಲವಾದ ಬೆಳಕು; ಜೀವನ್ದ ಹೊಸ ತಿರುವು ಎಂದರ್ಥ. ಸೂರ್ಯನು ಧನಸ್ಸು ರಾಶಿಯನ್ನು ಬಿಟ್ಟು ಮಕರ ರಾಶಿಯನ್ನು ಸೇರುವ ಪರ್ವಕಾಲ.

ಪುರಾಣ ಪುಣ್ಯ ಕಥೆಗಳಲ್ಲಿ ಸಂಕ್ರಾಂತಿ ಹಬ್ಬದ ಪ್ರಸ್ತಾಪವಿದೆ. ಸಂಕ್ರಾಂತಿಯ ದಿನ ಸ್ವರ್ಗದ ಬಾಗಿಲು ತೆರೆದಿರುತ್ತದೆ. ಅಂದು ಸಾವು ಬಂದರೆ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ. ಈ ನಂಬಿಕೆಯಿರುವುದರಿಂದಲೇ ಇರಬೇಕು; ಸಂಪ್ರದಾಯಸ್ಥರು ಸಾವು ಬಂದರೆ ಸಂಕ್ರಾಂತಿ ದಿನ ಬರಲಿ ಎಂದು ದೇವರನ್ನು ಪ್ರಾರ್ಥಿಸುತ್ತಾರೆ. ಇಚ್ಛಾಮರಣಿಯಾದ ಭೀಷ್ಮ ರಣರಂಗದಲ್ಲಿ ಬಾಣಗಳ ಮಂಚದ ಮೇಲೆ ನೋವನ್ನು ಅನುಭವಿಸುತ್ತಿದ್ದರೂ ಉತ್ತರಾಯಣದ ಪುಣ್ಯಕಾಲದ ಶುಭ ಘಳಿಗೆಗಾಗಿ ಕಾದು ದೇಹತ್ಯಾಗ ಮಾಡಿದ ಬಗ್ಗೆ ಕೇಳಿದ್ದೇವೆ. ಸಂಕ್ರಾಂತಿ ದಿನದಿಂದ ದೇವತೆಗಳಿಗೆ ಹಗಲು, ರಾಕ್ಷಸರಿಗೆ ರಾತ್ರಿಯಾಗುವುದೆಂಬ ಮತ್ತೊಂದು ನಂಬಿಕೆ.

ಸಂಕ್ರಾಂತಿ ಹಬ್ಬವನ್ನು ಭಾರತದಲ್ಲಿ ಅಲ್ಲದೆ ವಿದೇಶಗಳಲ್ಲಿಯೂ ಬೇರೆ ಬೇರೆ ಹೆಸರಿನಿಂದ ವಿಭಿನ್ನ ರೀತಿಯಲ್ಲಿ, ವಿಭಿನ್ನ ದೃಷ್ಟಿಯಿಂದ ಆಚರಿಸುವುದು ತಿಳಿದು ಬರುತ್ತದೆ. ಗ್ರೀಕರು ಸಂಕ್ರಾಂತಿಯನ್ನು **'ಬೇಕನ್'** ಎಂಬ ಹೆಸರಿನಿಂದ ಕರೆದು ಜಲಸಮೃದ್ಧಿಗಾಗಿ, ಸಸ್ಯಗಳ ಫಲಾಭಿವೃದ್ಧಿಗಾಗಿ ಆಚರಿಸಿದರೆ, ಈಜಿಪ್ಟಿನಲ್ಲಿ **'ನಮ್ ಫೆಸ್ಟಿವಲ್'** ರೋಮ್‌ನಲ್ಲಿ **'ಬ್ಯಾಕನ್ ಡೇ'** ಎಂಬ ಹೆಸರಿನಿಂದ ಆಚರಿಸುತ್ತಾರೆ. ರೋಮ್ ಭಾಷೆಯಲ್ಲಿ ಬ್ಯಾಕನ್ ಎಂದರೆ ಮನ್ಮಥ ಎಂದು ಅರ್ಥ. ವಿವಾಹಿತ ಸ್ತ್ರೀಯರು ಸಂತಾನ ಪ್ರಾಪ್ತಿಗಾಗಿ ಮನ್ಮಥನನ್ನು ಆರಾಧಿಸಿದರೆ, ಅವಿವಾಹಿತ ಸ್ತ್ರೀಯರು ಸದ್ಗುಣಗಳುಳ್ಳ ಗಂಡನನ್ನು ದೊರೆಯುವಂತೆ ಮಾಡು ಎಂದು ಪ್ರಾರ್ಥಿಸುತ್ತಾರೆ. ಸ್ವೀಡನ್ನಿನಲ್ಲಿ ಜನವರಿ ತಿಂಗಳ ಮಧ್ಯಭಾಗದಲ್ಲಿ ಗತಿಸಿದ ಹಿರಿಯರನ್ನು ನೆನಪಿಸಿಕೊಳ್ಳುವುದಕ್ಕಾಗಿ ಹಬ್ಬವನ್ನು ಆಚರಿಸುತ್ತಾರೆ.

ಭಾರತದ ವಿವಿಧ ಕಡೆಗಳಲ್ಲಿ ಬೇರೆ ಬೇರೆ ಹೆಸರು ಹೆಸರುಗಳಿಂದ ಕರೆಯುತ್ತಾರೆ. ತಮಿಳುನಾಡಿನಲ್ಲಿ **'ಪೊಂಗಲ್'** ಎಂದು ಕರ್ನಾಟಕದಲ್ಲಿ **'ಮಕರ ಸಂಕ್ರಾಂತಿ'** ಕೇರಳದಲ್ಲಿ **'ಮಕರ ವಿಳಕ್ಕು'** ಎಂದು ಕರೆಯುತ್ತಾರೆ. ಆಂಧ್ರಪ್ರದೇಶದಲ್ಲಿ **'ಪೆದ್ದ ಪಂಡುಗ'** ಎಂದು ಉತ್ತರ ಭಾರತದ ಕೆಲವು ಕಡೆ **'ಖಿಚಡಿ'**, ಬಂಗಾಲದಲ್ಲಿ **'ತಿಲುವಾ ಸಂಕ್ರಾಂತಿ'** ಎಂದು ಕರೆದರೆ, ಪಂಜಾಬಿನಲ್ಲಿ **'ಲೋಹಡಿ'** ಎಂದು ಕರೆಯುತ್ತಾರೆ.

ವರ್ಷದ ಆರಂಭದಲ್ಲಿ ಬರುವ ಸಂಕ್ರಾಂತಿ ಒಂದು ಮಹತ್ವಪೂರ್ಣವಾದ ಹಬ್ಬ. ಸೂರ್ಯನಿಗೆ ಸಂಬಂಧಪಟ್ಟ ಈ ಹಬ್ಬವು ಸೂರ್ಯನ ಪಥಚಲನೆಯ ಹಾಗೂ ಪ್ರಕೃತಿ ಪರಿವರ್ತನೆಯೂ ಹೌದು.

ನಮ್ಮ ಜನಪದರ ದೃಷ್ಟಿಯಲ್ಲಿ ಸಂಕ್ರಾಂತಿ ಹಬ್ಬಕ್ಕೆ ದೇವತೆಯ ಸ್ಥಾನ ನೀಡು ಮನದುಂಬಿ ಸ್ತುತಿಸಿದ್ದಾರೆ. ಅವರೊಬ್ಬರೆ ಆ ದೇವತೆಗೆ ಪೂಜೆ ಸಲ್ಲಿಸದೆ ತಮ್ಮ ಸ್ನೇಹಿತರನ್ನು, ಬಂಧುಗಳನ್ನು ಆಹ್ವಾನಿಸುತ್ತಾರೆ.

***ಸುಗ್ಗೀಯ ಬರಿಸಿ ಬಂದವಳೆ ಸಂಕ್ರಾಂತಮ್ಮ***
***ಸುಗ್ಗೀಯ ಹಿಗ್ಗು ಎಲ್ಲಾ ಕಸುಬಿನ ಜನಕೆ***
***ಒಟ್ಟಾಗಿ ಬನ್ನಿ ತಾಯಿ ಪೂಜೆಗೆ***

ನಮ್ಮ ಜನಪದರ ಹೃದಯ ಶ್ರೀಮಂತಿಕೆ ಅಪಾರ. ಅವರು ತಮ್ಮ ಗ್ರಾಮದಲ್ಲಿ ವಾಸಮಾಡುವ ಎಲ್ಲ ವರ್ಗದ ಜನರನ್ನು ಪ್ರೀತಿಯಿಂದ ಆಹ್ವಾನಿಸಿ ಒಟ್ಟಾಗಿ ಸಂಕ್ರಾಂತಿ ದೇವತೆಯ ಪೂಜೆ ಮಾಡುವ ಅವರ ವಿಶಾಲ ದೃಷ್ಟಿ ಇತರರಿಗೆ ಮಾರ್ಗದರ್ಶಿ. ಸರ್ವಧರ್ಮ ಸಮನ್ವಯಕ್ಕೆ ಜ್ವಲಂತ ನಿದರ್ಶನ. ಗ್ರಾಮೀಣ ಪ್ರದೇಶದಲ್ಲಿ ರೈತರು ಸಂಕ್ರಾಂತಿಯನ್ನು ಸಂತೋಷ, ಸಂಭ್ರಮ ಉಲ್ಲಾಸದಿಂದ ಆಚರಿಸುತ್ತಾರೆ. ಸಾಮಾನ್ಯವಾಗಿ ರೈತರು ಜನವರಿ ತಿಂಗಳ

ಆರಂಭದಲ್ಲಿ ಬೆಳೆಗಳನ್ನು ಕೊಯ್ಲು ಮಾಡಿ ಕಣದಲ್ಲಿ ಹಾಕಿ ಶುದ್ಧ ಮಾಡಿ ದವಸ ಧಾನ್ಯಗಳನ್ನು ಮನೆಯಲ್ಲಿ ತುಂಬಿಕೊಳ್ಳುವ ಸಡಗರದ ಸಂದರ್ಭ. ರೈತ ಸಮುದಾಯಕ್ಕೆ ಇದು ಸಮೃದ್ಧಿ ಸಂತೋಷದ ಕಾಲವೂ ಆಗಿದೆ. ಹಿಡಿಯಾಗಿ ಭಿತ್ತಿದ ಕಾಳನ್ನು ಚೀಲಗಟ್ಟಲೆ ಹಿಗ್ಗಿಸಿದ ಭೂತಾಯಿಯ ಋಣ ಸ್ಮರಣೆ ಮಾಡುವ ದಿನ ಸಂಕ್ರಾಂತಿ. ಈ ಸಂದರ್ಭದಲ್ಲಿ ಬೇಸಾಯ ಕಾಯಕದಲ್ಲಿ ತಮ್ಮೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ದುಡಿದ ಜಾನುವಾರುಗಳಿಗೂ ಪಾಲು ನೀಡಿ ಅವುಗಳಿಗೆ ಮೈತೊಳೆದು ಅಲಂಕಾರ ಮಾಡಿ ಮೆರೆಸುವ ದೃಷ್ಟಿಕೋನ ಮೆಚ್ಚುವಂಥಹುದು.

ಚಳಿಗಾಲ ಮುಗಿಯುವ ಹೊತ್ತಿಗೆ ಸಂಕ್ರಾಂತಿಯ ಆಗಮನವಾಗುತ್ತದೆ. ಸೂರ್ಯ ಮುಂಜಾನೆಯ ಸೆರಗನ್ನು ಸರಿಸಿಕೊಂಡು ಭೂತಾಯಿಯ ಮೇಲೆ ಹೊಂಬಣ್ಣದ ಬೆಳಕನ್ನು ಚೆಲ್ಲುತ್ತಾನೆ. ಸಂಕ್ರಾಂತಿಯ ಮುಂಜಾನೆ ರೈತರು ತಮ್ಮ ದನಕರುಗಳನ್ನು ಹೊಡೆದುಕೊಂಡು ಊರ ಹೊರಗಿನ ಹೊಳೆ ಕಡೆಗೋ, ಕೆರೆ, ಕಟ್ಟೆ, ಕಾಲುವೆ ಕಡೆಗೋ ಹೆಜ್ಜೆ ಹಾಕುತ್ತಾರೆ. ಆ ಹೆಜ್ಜೆಗಳಲ್ಲಿ ಭರವಸೆಗಳು ತುಂಬಿರುತ್ತವೆ. ದನಕರುಗಳ ಮೇಲಿನ ವರ್ಷದ ಮೇಲಿನ ವರ್ಷದ ಕೊಳೆ ತೆಗೆಯಲು ಅವುಗಳಿಗೆ ಸ್ನಾನ ಮಾಡಿಸುತ್ತಾರೆ. ನಂತರ ಮನೆಗೆ ಹೊಡೆದುಕೊಂಡು ಬಂದು ಹೂವು, ಬಣ್ಣಬಣ್ಣದ ಬಟ್ಟೆಗಳಿಂದ ಸಿಂಗರಿಸುತ್ತಾರೆ. ಹಬ್ಬದ ಹಿಂದಿನ ದಿನವೇ ಕೊಂಬುಗಳಿಗೆ ಕುಚ್ಚು, ಬಲೂನು ಕಟ್ಟಿ ಸಿಂಗರಿಸುತ್ತಾರೆ.



ಸಂಕ್ರಾಂತಿ ಹಬ್ಬದಲ್ಲಿ ವಿಶೇಷವಾದ ಆಚರಣೆ ಎಂದರೆ, ಕಿಚ್ಚು ಹಾಯಿಸುವುದು. ಕರ್ನಾಟಕದಲ್ಲಿ ತುಮಕೂರು, ಚಿತ್ರದುರ್ಗ, ಮುಂತಾದ ಬಯಲು ಸೀಮೆ ಪ್ರದೇಶದಲ್ಲಿ ಈ ಹಬ್ಬದ ಸೊಗಸು ಒಂದು ರೀತಿಯಾದರೆ, ಬೆಂಗಳೂರು ಗ್ರಾಮಾಂತರ, ಕೋಲಾರ, ಮೈಸೂರು, ಚಾಮರಾಜನಗರ, ಮಂಡ್ಯ ಜಿಲ್ಲೆಗಳಲ್ಲಿ ಇದರ ಸೊಗಸೇ ಬೇರೆ ರೀತಿಯದು. ಅಂದಿನ ದಿನ ನಡೆಯುವ ಬಹು ಮುಖ್ಯ ಆಚರಣೆ ಎಂದರೆ, ದನಗಳ ಮೆರವಣಿಗೆ, ದನ ಓಡಿಸುವುದು, ಕಿಚ್ಚು ಹಾಯಿಸುವುದು ಮುಂತಾದುವು. ಈ ಆಚರಣೆಗಳ ಮೂಲಕ ಯಶಸ್ವೀ ಸುಗ್ಗಿಗೆ ಕಾರಣೀಭೂತವಾದ ಜಾನುವಾರುಗಳಿಗೆ ಅರ್ಥಪೂರ್ಣವಾದ ಕೃತಜ್ಞತೆಗಳನ್ನು ಸಲ್ಲಿಸಲಾಗುತ್ತದೆ.

ದೇವಸ್ಥಾನದ ಮುಂಭಾಗದಲ್ಲಿ ಅಥವಾ ಸ್ವಲ್ಪ ವಿಶಾಲವಾದ ಸ್ಥಳದಲ್ಲಿ ದಾರಿಗೆ ಅಡ್ಡವಾಗಿ ಭತ್ತದ ಹುಲ್ಲನ್ನು ಹಾಕಿ ಒಂದೇ ಸಲಕ್ಕೆ ಎಲ್ಲ ಹುಲ್ಲು ಹತ್ತಿಕೊಳ್ಳುವಂತೆ ಬೆಂಕಿ ಹಾಕುತ್ತಾರೆ. ಕೆಲವು ಕಡೆ ಒಣಗಿದ ಸೊಪ್ಪು, ಎಲೆಯನ್ನು ಹರಡಿ ಬೆಂಕಿ ಹಚ್ಚುವುದೂ ಉಂಟು. ಕಿಚ್ಚು ಹಾಕಿರುವುದು ಕಾಣಿಸಿದ ಕುಡಲೇ ಏಳೆಂಟು ಅಡಿ ಎತ್ತರದ ಬೆಂಕಿ ಜ್ವಾಲೆಯಲ್ಲಿ ಅಲಂಕೃತಗೊಂಡ ಎತ್ತುಗಳು ಮತ್ತು ಅವುಗಳ ಒಡೆಯನು ನೆಗೆಯುತ್ತ ಮಬ್ಬು ಗತ್ತಲಿನಲ್ಲಿ ಕಿಚ್ಚು ಹಾಯಿಸುವ ದೃಶ್ಯ ಕಣ್ಣಿಗೆ ಹಬ್ಬ. ಕಿಚ್ಚು ಹಾಯಿಸುವಾಗ ದನಕರುಗಳ ನಾಗಾಲೋಟಕ್ಕೆ ಚಿಮ್ಮುವ ಧೂಳು ಮುಗಿಲೆತ್ತರಕ್ಕೆ ವ್ಯಾಪಿಸಿರುತ್ತದೆ. ಈ ಅಪೂರ್ವ ಸನ್ನಿವೇಶವನ್ನು ಜನಪದರು ಬಹು ಸೊಗಸಾಗಿ ವರ್ಣಿಸಿದ್ದಾರೆ.

*ಆರು ಸಾವಿರ ಜಂಗು ಮೂರು ಸಾವಿರ ಗಂಟೆ*
*ದೂರ ಕೇಳ್ಯಾವು ಗಗನಕೆ–ನಮ್ಮ ಬಸವ*
*ಧೂಳು ಎಬ್ಬಿಸ್ಯಾನೋ ಶಿವನೀಗಿ*

ಬಣ್ಣಬಣ್ಣದ ಚಾವಟಿಯಿಂದ ಬಾರಕೋಲನ್ನು ಮೇಲಕ್ಕೆತ್ತಿ ಕೇಕೇ ಹಾಕುತ್ತಾ ಓಡಿಸಿಕೊಂಡು ಹೋಗುವಾಗಿನ ದೃಶ್ಯ ನೋಡಲು ಮನಮೋಹಕ. ಕಿಚ್ಚು ಹಾಯಿಸುವ ಮುನ್ನ ಅಲಂಕರಿಸಿದ ದನಕರುಗಳನ್ನು ಊರ ಹೊರಗಿನ ಗೋಮಾಳಕ್ಕೆ ಅಥವಾ ಬಯಲಿಗೆ ಹೊಡೆದುಕೊಂಡು ಹೋಗುತ್ತಾರೆ. ಕೆಲವು ಪ್ರದೇಶಗಳಲ್ಲಿ ಉದಾ: ಮಂಡ್ಯ ಜಿಲ್ಲೆಯಲ್ಲಿ ಪೊಂಗಲು ಬೇಯಿಸುತ್ತಾರೆ. ಹುತ್ತಕ್ಕೆ ಪೂಜೆ ಮಾಡುತ್ತಾರೆ. ನಂತರ ದನಕರುಗಳನ್ನು ಬಲಗಡೆಯಿಂದ ಹುತ್ತವನ್ನು ಒಂದು ಸುತ್ತು ಬಳಸಿಕೊಂಡು ಪೊಂಗಲೇ ಎಂದು ಕೂಗುತ್ತಾ ಪೊಂಗಲನ್ನು ಎರಚುತ್ತಾರೆ. ಕಿಚ್ಚು ಹಾಯಿಸುವುದು ರೈತರಿಗೆ ಸಂಭ್ರಮದ ಸಂಕೇತವಾದರೆ, ವೈಜ್ಞಾನಿಕ ದೃಷ್ಟಿಕೋನದಿಂದಲೂ ಅದಕ್ಕೊಂದು ಮಹತ್ವವಿದೆ. ವರ್ಷವಿಡೀ ದುಡಿದ ರಾಸುಗಳ ಆಯಾಸ ನಿವಾರಣೆಗೆ ಬೆಂಕಿ ಕಾವು ಕೊಟ್ಟರೆ, ತಮ್ಮ ದೈನಂದಿನ





ಕೆಲಸ ಕಾರ್ಯಗಳಲ್ಲಿ ಮತ್ತಷ್ಟು ಚುರುಕು ತೋರಿಸುತ್ತವೆ. ಅಲ್ಲದೇ ಚಳಿಗಾಲದಲ್ಲಿ ರಾಸುಗಳಿಗೆ ಕ್ರಿಮಿಕೀಟಗಳು ಬಾಧಿಸುತ್ತಿರುತ್ತವೆ. ಮೈಸಹ ಜಿಡ್ಡುಗಟ್ಟಿರುತ್ತದೆ. ಇಂಥ ಸಂದರ್ಭದಲ್ಲಿ ಬೆಂಕಿಯೊಡನೆ ಮೈ ಆಡಿಸುವುದರಿಂದ ಅವುಗಳ ಮೈಗೆ ಕಚ್ಚಿಕೊಂಡಿರುವ ಕ್ರಿಮಿಕೀಟಗಳು ಬೆಂಕಿಯ ಝಳಕ್ಕೆ ಕೆಳಗೆ ಬೀಳುತ್ತವೆ. ಇದರಿಂದ ಕ್ರಿಮಿಕೀಟಗಳ ಬಾಧೆಯಿಂದ ಮುಕ್ತವಾಗುತ್ತವೆ.

ಕಿಚ್ಚು ಹಾಯಿಸುವ ಮೂಲ ಉದ್ದೇಶ ಕಾರ್ತೀಕದಲ್ಲಿ ಚೆನ್ನಾಗಿ ಮೇದು ಸೊಗಸಾದ ದನಕರುಗಳಿಗೆ ಕಣ್ಣೆಸರಲಾಗದಿರಲೆಂಬ ಕಾರಣ ಒಂದಾದರೆ. ಈಗಾಗಲೇ ಪ್ರಸ್ತಾಪಿಸಿದಂತೆ ಈ ಉರಿಯ ಸೋಂಕಿಗೆ ಸಾಂಕ್ರಾಮಿಕ ರೋಗಗಳು ನಾಶವಾಗಲೆಂಬುದು ಮತ್ತೊಂದು ಆಶಯವಿರಬಹುದೇನೋ, ಕಿಚ್ಚಿನ ಬೂದಿಯನ್ನು ಒಂದು ಹಿಡಿಯಷ್ಟು ತೆಗೆದುಕೊಂಡು ಮನೆಗೆ ಹೋಗಿ, ಮನೆಯಲ್ಲಿರುವ ಜಾನುವಾರುಗಳ ಮೈ ತಿಕ್ಕುತ್ತಾರೆ. ಮನೆ ಮಂದಿಯೆಲ್ಲಾ ಹಣೆಗೆ ಇಟ್ಟುಕೊಳ್ಳುತ್ತಾರೆ. ಹೀಗೆ ಬೂದಿಯನ್ನು ಇಟ್ಟುಕೊಳ್ಳುವುದರಿಂದ ದೋಷ ಪರಿಹಾರವಾಗುತ್ತದೆಂಬ ನಂಬಿಕೆ. ಅಲ್ಲದೆ ಜಾನುವಾರುಗಳು ದಾಟಿದ ಬೂದಿ ಪವಿತ್ರ ಎಂಬ ಪ್ರತೀತಿ.

ಗೋಪಾಲಕರೆಂದು ಕರೆಯಲಾಗುವ ಗೊಲ್ಲರು ಸಂಕ್ರಾಂತಿ ಹಬ್ಬವನ್ನು ವಿಶಿಷ್ಟವಾಗಿ ಆಚರಿಸುತ್ತಾರೆ. ಈ ಹಬ್ಬದಲ್ಲಿ ಗೋವುಗಳ ಪೂಜೆ ಆರೈಕೆಗೆ ಹೆಚ್ಚಿನ ಮಹತ್ವ ನೀಡುತ್ತಾರೆ. ಇವರಿಗೆ ಸಂಕ್ರಾಂತಿ ಎರಡು ದಿನಗಳ ಹಬ್ಬ. ಮೊದಲನೆಯ ದಿನ **'ಬೋಗಿ ಹಬ್ಬ'** ಎರಡನೆಯ ದಿನ **'ಮಕರ ಸಂಕ್ರಾಂತಿ'**. ಮೊದಲ ದಿನ ಬೋಗಿ ಹಬ್ಬದಂದು. ಕೆಲವು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಸಂಕ್ರಾಂತಿಯ ಹಬ್ಬದ ದಿನ ಬೆಳಗಿನ ಜಾವವೆ ರೈತರು ತಮ್ಮ ಜಾನುವಾರುಗಳಿಗೆ ಮೈತೊಳೆದು ಚೆನ್ನಾಗಿ ಮೇವು ತಿನ್ನಿಸುತ್ತಿದ್ದಂತೆಯೆ ಗ್ರಾಮದ ತೋಟಿಯು ಗ್ರಾಮದ ಹೆಬ್ಬಾಗಿಲುಗಳಲ್ಲಿ ತೋರಣ ಕಟ್ಟಿ ಹಬ್ಬಕ್ಕೆ ಶುಭ ಹಾರೈಸುತ್ತಾನೆ. ಊರಿನಲ್ಲಿ ಎಲ್ಲರೂ ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿ ಮನೆಮುಂದೆ ಬಣ್ಣ ಬಣ್ಣದ ರಂಗೋಲಿ ಬಿಡುತ್ತಾರೆ. ಕೆಲವರು ರಂಗೋಲಿ ಬಳಿ ಅನ್ನದ ಪಾತ್ರೆ ಇಟ್ಟು ಪೂಜಿಸಿ ಅದನ್ನು **'ಅಕ್ಷಯ ಪಾತ್ರೆ'** ಎಂದು ಕರೆಯುತ್ತಾರೆ. ಪಾಂಡವರು ವನವಾಸ ಮಾಡುತ್ತಿದ್ದ ಸಂದರ್ಭದಲ್ಲಿ ದೂರ್ವಾಸಮುನಿ ತಮ್ಮ ಶಿಷ್ಯ ಪರಿವಾರದೊಂದಿಗೆ ಬಂದು ಧರ್ಮರಾಯನಿಗೆ ಊಟದ ವ್ಯವಸ್ಥೆ ಮಾಡುವಂತೆ ಕೇಳುತ್ತಾನೆ. ಆ ವೇಳೆಗೆ ಪಾಂಡವರ ಊಟ ಮುಗಿದಿರುತ್ತದೆ. ಧರ್ಮರಾಯನ ಆಣತಿಯಂತೆ ದ್ರೌಪದಿ ಅವರಿಗೆಲ್ಲ ಊಟದ ವ್ಯವಸ್ಥೆ ಮಾಡಲು ದಾರಿ ಕಾಣದೆ ತಮ್ಮ ಆಪದ್ಭಾಂದವ ಕೃಷ್ಣನಲ್ಲಿ ಮೊರೆಯಿಡುತ್ತಾಳೆ. ಆಕೆಯಲ್ಲಿದ್ದ ಒಂದು ಪಾತ್ರೆಯಲ್ಲಿ ಒಂದು ಅಗುಳು ಅನ್ನ ಉಳಿದಿರುತ್ತದೆ. ಕೃಷ್ಣನ ಕೃಪೆಯಿಂದ ಅದು ಅಕ್ಷಯ ಪಾತ್ರೆಯಾಗುತ್ತದೆ. ದುರ್ವಾಸ ಮುನಿಗೆ ಹಾಗೂ ಅವನ ಶಿಷ್ಯರಿಗೆ ಬಗೆಬಗೆಯ ಭಕ್ಷ್ಯ ಭೋಜ್ಯಗಳನು ಬಡಿಸಿ ತೃಪ್ತಿಪಡಿಸುತ್ತಾಳೆ. ಕೃಷ್ಣ ಗೊಲ್ಲರ ಕುಲದೈವಾದುದರಿಂದ ಆ ಘಟನೆಯ ನೆನಪಿಗಾಗಿ ಈ ಆಚರಣೆ ರೂಢಿಗೆ ಬಂದಿರಬಹುದು.

ಗೊಲ್ಲರು ಗೋವಿನ ದೊಡ್ಡಿಯಲ್ಲಿ ಸಗಣಿಯಿಂದ ಉಂಡೆಯಾಕಾರದಲ್ಲಿ ಮಾಡಿ ಅದರ ಮೇಲೆ ಗರಿಕೆ ಹುಲ್ಲನ್ನು ಸಿಕ್ಕಿಸಿ ಒಂಬತ್ತು, ಒಂಬತ್ತರಂತೆ ದೊಡ್ಡಿಯ ಆಕಾರದಲ್ಲಿ ಜೋಡಿಸುತ್ತಾರೆ. ಇವುಗಳನ್ನು ಕೆಲವು ಕಡೆ **'ಗೊಬ್ಬಿಯುಳ್ಳೂ'** ಎಂದು ಕರೆಯುತ್ತಾರೆ. ಇದರ ಮಧ್ಯೆ ಕೃಷ್ಣನ ವಿಗ್ರಹವನ್ನು ಇಟ್ಟು ಪೂಜಿಸಿ ಅದಕ್ಕೆ **'ಪೊಂಗಲ್'**ನ್ನು ನೇವೇಧ್ಯ ಮಾಡುತ್ತಾರೆ. ಇದಕ್ಕೆ **'ಸಲ್ ಮುದ್ದುಲು'** (ತನ್ನಿದ ಮುದ್ದೆ) ಎಂದು ಕರೆಯುತ್ತಾರೆ. ಇದರ ಮುಂದೆ ಹಾಲು, ಮೊಸರನ್ನ ಇಟ್ಟು ಪೂಜಿಸಿ ಗೊಲ್ಲತಿಯರು ಕೃಷ್ಣನನ್ನು ಕುರಿತು ಹಾಡು ಹಾಡುತ್ತಾರೆ. ಈ ಹಾಡುಗಳನ್ನು ಗೊಬಿಯಳ್ಳು ಹಾಡುಗಳೆಂದು ಹೇಳುತ್ತಾರೆ. ಕೆಲವು ಕಡೆ ಗೊಲ್ಲರ ಜೊತೆ ಗ್ರಾಮದ ಇತರರೂ ಆಚರಿಸುತ್ತಾರೆ. ಪೂಜೆಯ ನಂತರ ಅದರ ಸುತ್ತ ಗೋವುಗಳನ್ನು ಸ್ತುತಿಸುತ್ತಾರೆ. ಈ ಸಂದರ್ಭದಲ್ಲಿ ಕೆಲವು ಕಡೆ ಪಿಳ್ಳಂಗೋವಿ ಅಥವಾ ಕೊಳಲನ್ನು ಊದಿ ಕುಣಿಯುತ್ತಾರೆ. ಜುಂಜಪ್ಪನು ದನಗಳನ್ನು ಕಾಯುವಾಗ ನುಡಿಸುತ್ತಿದ್ದನೆಂದು ಹೇಳುತ್ತಾರೆ. ಇದರಿಂದ ಗೋವುಗಳ ಆರೋಗ್ಯ ಮತ್ತು ಗೋಸಮೃದ್ಧಿಯಾಗುತ್ತದೆಂಬ ನಂಬಿಕೆ.

ನಂತರ ಸಂಜೆಯ ವೇಳೆಯಲ್ಲಿ **'ಗೋವು ಕಲ್ಲು'** ಪೂಜೆ ಮಾಡುತ್ತಾರೆ. ದೇವಾಲಯದ ಒಂದು ಭಾಗದಲ್ಲಿ ಚೌಕಾಕಾರದ ಹೊಂಡದಲ್ಲಿ ಲಿಂಗಾಕೃತಿಯ ಕಲ್ಲಿನ ಒಂದು ಪುಟ್ಟ ಕಂಬದ ಸುತ್ತಲೂ ರಂಗೋಲಿ ಹಾಕಿ ಪೂಜೆ ಮಾಡುತ್ತಾರೆ. ಇದನ್ನು 'ಗೋವು ಕಲ್ಲು' ಪೂಜೆ ಎಂದು ಕರೆಯುತ್ತಾರೆ. ಕೆಲವು ಕಡೆ ಈ ಗೋವು ಕಲ್ಲು ಪೂಜೆಯನ್ನು ಊರಿನ ಹೊರಭಾಗದಲ್ಲಿ ಆಚರಿಸುತ್ತಾರೆ. ಅಲ್ಲಿ ಪೂಜಾರಿ ಒಂದು ಸಣ್ಣ ಗುಡಿಯನ್ನು ನಿರ್ಮಿಸಿ ಅಲ್ಲಿ ಗೋವುಕಲ್ಲನ್ನು ಇಟ್ಟು ಪೂಜೆ ಮಾಡುತ್ತಾನೆ. ಈ ಗೋವು ಕಲ್ಲು ಪೂಜೆಯನ್ನು **'ಕಾಟಪ್ಪ'**ನ ಪೂಜೆಯೆಂದು, **'ಕಾಟುವರಾಜ'**ನ ಪೂಜೆಯೆಂದು, **'ಕಾಟಯ್ಯನ'** ಪೂಜೆ ಎಂದು ಕರೆಯುತ್ತಾರೆ.

ಕಾಟಯ್ಯ ಗೋವುಗಳನ್ನು ಕಾಯುತ್ತಿದ್ದ ವೀರನೆಂಬ ಪ್ರತೀತಿ. ಈ ಕಾರಣದಿಂದಲೇ ಇರಬೇಕು ಸಂಕ್ರಾಂತಿಯಂದು ಕಾಟಯ್ಯನಿಗೆ ವಿಶೇಷ ಮನ್ನಣೆ, ಗೌರವ ನೀಡಿ ಪೂಜಿಸ ಲಾಗುತ್ತದೆ. ಈ ಗೋವು ಕಲ್ಲು ಅಥವಾ ಕಾಟಯ್ಯನ ಪೂಜಾ ಸಮಯದಲ್ಲಿ ಊರಿನ ದನ ಕರುಗಳನ್ನು ಅಲ್ಲಿ ಒಟ್ಟುಗೂಡಿಸಲಾಗುತ್ತದೆ. ಅಲ್ಲಿ ಕಾಟಯ್ಯನಿಗೆ ನೇವೇದ್ಯ ಮಾಡಿದ ಪೊಂಗಲನ್ನು ದನಕರುಗಳ ಮೇಲೆ ಎರಚುತ್ತಾರೆ. ಹೀಗೆ ಮಾಡುವುದರಿಂದ ಜಾನುವಾರುಗಳಿಗೆ ಯಾವುದೇ ಕೇಡು ಬರದಂತೆ ತಡೆಯುತ್ತದೆ ಎಂಬ ನಂಬಿಕೆ ಇದೆ. ಇದನ್ನು ಪ್ರಸಾದದ ರೂಪದಲ್ಲಿ ದನಕರುಗಳಿಗೆ ತಿನ್ನಿಸುತ್ತಾರೆ. ಸಂಕ್ರಾಂತಿ ವೇಳೆಗೆ ಬೆಳೆ ಕುಯ್ಲಿಗೆ ಬರುತ್ತದೆ. ಆ ಬೆಳೆಯಿಂದ ಬಂದ ದವಸ ಧಾನ್ಯಗಳನ್ನು ಒಂದೆಡೆ ರಾಶಿ ಹಾಕಿ ಪೂಜಿಸಿ ಸಂತೋಷ ಪಡುವುದು ಸಂಕ್ರಾಂತಿಯ ವಿಶೇಷಗಳಲ್ಲೊಂದು. ಕನಕಪುರ, ಚಾಮರಾಜನಗರ, ಕೊಳ್ಳೇಗಾಲ ಪ್ರದೇಶಗಳಲ್ಲಿ ಇಂಥ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಇಲ್ಲಿನ ಮತ್ತೊಂದು ವಿಶೇಷವೆಂದರೆ ಈ ಪೂಜೆಗೆ ಬಳಸುವ ಎಲ್ಲಾ ಹೂವುಗಳೂ ಕೂಡ ಆಧುನಿಕ ಕೃಷಿಯಲ್ಲಿ ಕಳೆ ಎಂದು ತಿರಸ್ಕರಿಸಿದ ಲಾಂಟನ, ಉಗನಿ, ಉತ್ರಾಣಿ ಮುಂತಾದ ಗಿಡಗಳದ್ದೇ ಆಗಿರುತ್ತದೆ. ಎದೆತುಂಬಿ ಬೆಳೆದ ಬೆಳೆ ಕೊಯ್ಲಾದ ನಂತರ ಅವುಗಳ ಬುಡದಲ್ಲಿಯೇ ಈ ಕಳೆಗಿಡಗಳೂ ಹೂ ಬಿಟ್ಟು ಕಂಗೊಳಿ ಸುತ್ತಿರುತ್ತವೆ. ಅವುಗಳನ್ನು ಪೂಜೆಗೆ ಬಳಸುವ ಮೂಲಕ ಅವುಗಳಿಗೆ ಕೃಷಿಯಲ್ಲಿ ಮಹತ್ವದ ಸ್ಥಾನ ನೀಡಿದ್ದಾರೆ. ಸಾಂಪ್ರದಾಯಿಕ ಕೃಷಿಯಲ್ಲಿ ಕಳೆಗಳೂ ಕೂಡ ಕೃಷಿಯ ಅವಿಭಾಜ್ಯ ಅಂಗವಾಗಿದ್ದವು ಎನ್ನುವುದಕ್ಕೆ ಸಂಕ್ರಾಂತಿ ಹಬ್ಬ ಒಂದು ಜ್ವಲಂತ ನಿದರ್ಶನ.

ಕನಕಪುರ ತಾಲ್ಲೂಕಿನ ಕೆಲವು ಭಾಗದಲ್ಲಿ ಹಬ್ಬದ ಒಂದು ಅಂಗವಾಗಿ 'ಕಾಟಮ ರಾಯ' ಹಬ್ಬವನ್ನು ಊರ ಹೊರಭಾಗದ ನದಿದಂಡೆಯಲ್ಲಿ ಆಚರಿಸುತ್ತಾರೆ. ಈ ಆಚರಣೆಯ ಮೂಲ ಉದ್ದೇಶ ಬರಡಾದ ರಾಸುಗಳು ಫಲ ನೀಡಲಿ ಎಂದು ರೈತರು ದೇವರನ್ನು ಪ್ರಾರ್ಥಿಸುವ ಹಬ್ಬ. ಈ ಹಬ್ಬಕ್ಕೆ ಊರ ಹೊರಗಡೆಯ ಕೆರೆ ಸಮೀಪದಲ್ಲಿ ಸಗಣಿಯಿಂದ ಗೋಪುರ ಮಾಡಿ, ಅದಕ್ಕೆ ಅರಿಶಿನ, ಕುಂಕುಮ ಇಟ್ಟು ಉಗನಿ(ಕಳೆಹೂ) ಹೂ ಮುಡಿಸಿ ಪೂಜೆ ಸಲ್ಲಿಸುತ್ತಾರೆ. ನಂತರ ಸಂಜೆ ಕಿಚ್ಚು ಹಾಯಿಸುತ್ತಾರೆ.

**ಕಾಟಮರಾಯ** : ಇದೊಂದು ಕುತೂಹಲಕಾರಕ ಅಂಶ. ಹಬ್ಬದ ದಿನ ಊರ ಹೊರಭಾಗದಲ್ಲಿ ಒಂದು ಹಸಿ ಜೇಡಿಮಣ್ಣಿನ ಚಿಕ್ಕದಾದ ಪಿರಮಿಡ್ ಆಕಾರದಲ್ಲಿ ಗುಡಿಯನ್ನು ಕಟ್ಟುತ್ತಾರೆ. ಇದನ್ನು ಕಾಟಮ್‌ರಾಯ, ಕಾಟ್ ಮೆಟ್ರಾಯ, ಸಂಕ್ರಾಂತಮ್ಮನ ಗುಡಿ ಇತ್ಯಾದಿ ಹೆಸರು ಗಳಿಂದ ಕರೆಯುತ್ತಾರೆ. ಅದನ್ನು ಸಿಂಗರಿಸುವ ರೀತಿ ಸುಂದರ. ಕಾರೆಗಿಡದ ಕೊಂಬೆಗಳನ್ನು ಮುಳ್ಳು ಸಮೇತ ಕಿತ್ತು ತಂದು ಮುಳ್ಳುಗಳ ತುದಿಗೆ ಉಗನಿ ಹೂವುಗಳನ್ನು ಚುಚ್ಚಿ ಗುಡಿಯ ನಾಲ್ಕು ಕಡೆ ಸಿಕ್ಕಿಸುತ್ತಾರೆ. ತಿಳಿ ಹಸಿರು ತೊಟ್ಟಿನಿಂದ ಕೂಡಿದ ಅಚ್ಚ ಬಿಳಿ ಬಣ್ಣದ ಉಗನಿ ಹೂವು ನೋಡಲು ಆಕರ್ಷಕವಾಗಿದ್ದು, ಮುಳ್ಳಿಗೆ ಜೋಡಿಸಿದ ಅವುಗಳನ್ನು ನೋಡುವುದೇ ಚೆಂದ. ಜೊತೆಗೆ ಗುಡಿಯ ಮೇಲೆ ಉತ್ತರಾಣಿ ಕಡ್ಡಿಗಳನ್ನು ಚುಚ್ಚಿ ಅರಿಶಿನ-ಕುಂಕುಮ ಬಳಿದು ಮಧ್ಯದಲೊಂದು ತೂತು ಮಾಡಿ ದೀಪ ಹಚ್ಚಿಟ್ಟು ಎಡೆ ಹಾಕಿ ಸಿಂಗರಿಸಿದ ದನಗಳಿಗೆ ಪೂಜೆ ಸಲ್ಲಿಸುತ್ತಾರೆ.

ಸಂಕ್ರಾಂತಿ ಹಬ್ಬದ ಮತ್ತೊಂದು ವೈಶಿಷ್ಟ್ಯವೆಂದರೆ ಎಳ್ಳುಬೆಲ್ಲದ ಕೊಡುಕೊಳ್ಳುವಿಕೆ. ಈ ಹಬ್ಬದಲ್ಲಿ ಎಳ್ಳಿನ ದಾನಕ್ಕೆ ಹೆಚ್ಚು ಮಹತ್ವಕೊಡುತ್ತಾರೆ. ಎಳ್ಳನ್ನು ದಾನ ಮಾಡುವುದರಿಂದ ಪಾಪ ಕಳೆಯುತ್ತದೆ, ಕಷ್ಟ ಪರಿಹಾರ ವಾಗುತ್ತದೆ ಎಂಬ ನಂಬಿಕೆಯ ಹಿನ್ನಲೆಯಲ್ಲಿ 'ಎಳ್ಳಿ'ಗೆ ಮಹತ್ವ ಬಂದಿದೆ. ಎಳ್ಳು ಪೀಡೆಯ ಪರಿಹಾರಕ್ಕೆ ಎಂಬುದು ಜನಪದರ ಮೂಲ ಉದ್ದೇಶವಾದರೂ '**ಎಳ್ಳು ತಿಂದು ಒಳ್ಳೆಯ ಮಾತನಾಡು**' ಎನ್ನುವಾಗ ಅದು ಪ್ರೀತಿ, ಸ್ನೇಹದ ಸಂಕೇತವೂ ಆಗಿದೆ. ಅದನ್ನು ವಿತರಿಸುವ ಸಲುವಾಗಿ ಪ್ರೀತಿ ಪಾತ್ರರ, ಸ್ನೇಹಿತರ ಭೇಟಿ, ಯೋಗಕ್ಷೇಮ ವಿನಿಮಯ ನಡೆಯುತ್ತದೆ. ಎಷ್ಟೋ ವೇಳೆ ಬೀರಬೇಕಾದ ಎಳ್ಳನ್ನು ವಾರಗಳ, ತಿಂಗಳ ನಂತರ ನೆಂಟರಿಷ್ಟರ ಮನೆಗೆ ತಲುಪಿಸುವುದುಂಟು. ಇತ್ತೀಚೆಗೆ ದೂರದ ಊರಿನಲ್ಲಿರುವ ಆಪ್ತೇಷ್ಟರಿಗೆ ಅಂಚೆಯ ಮೂಲಕ ಕಳುಹಿಸುವ ಪರಿಪಾಠವೂ ಬೆಳೆದು ಬಂದಿದೆ.

ಎಳ್ಳಿನಲ್ಲಿ ಪೌಷ್ಟಿಕಾಂಶವು ಸಾಕಷ್ಟು ಪ್ರಮಾಣದಲ್ಲಿದ್ದು ಅದರ ಸೇವನೆಯಿಂದ ಆರೋಗ್ಯ ಉತ್ತಮವಾಗುತ್ತದೆಂದು ತಿಳಿದು ಬಂದಿದೆ. ಅಯುರ್ವೇದವೂ ಸಹ ಎಳ್ಳಿನಲ್ಲಿ ಪೌಷ್ಟಿಕಾಂಶ ಇರುವ ಬಗ್ಗೆ ದೃಢೀಕರಿಸಿದೆ. ಇದನ್ನು ನಿರ್ದಿಷ್ಟ ಪ್ರಮಾಣದಲ್ಲಿ ಸೇವಿಸುವುದರಿಂದ ನಿಶ್ಯಕ್ತಿ, ಯಕೃತ್ತಿನ ತೊಂದರೆ, ಮಾಸಿವ ಸ್ರಾವದ ತೊಂದರೆ, ರಕ್ತಬೇಧಿ ಹೊಟ್ಟೆಯ ಹುಣ್ಣು, ಸುಟ್ಟಗಾಯುಗಳಿಗೆ ಹಾಗೂ ತಲೆಗೂದಲಿನ ಆರೋಗ್ಯ ಕಾಪಾಡುವಲ್ಲಿ ಮಹತ್ತರ ಪಾತ್ರ ವಹಿಸುತ್ತದೆ. ಎಳ್ಳಿನ ಜೊತೆ ಬೆಲ್ಲವನ್ನು ಸೇರಿಸಿದ್ದಾರೆ. ಇದೂ ಸಹ ರಕ್ತ ವರ್ಧಕ, ಪುಷ್ಟಿಕರವೆಂದು ಆಯುರ್ವೇದ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ. ಎಳ್ಳು ಬೆಲ್ಲದ ಜೊತೆಗೆ ಕಡಲೆ ಬೀಜವನ್ನು ಸೇರಿಸುತ್ತಾರೆ. ಇದೂ ಸಹ ಅತ್ಯುತ್ತಮ ಪೌಷ್ಟಿಕ ಆಹಾರ. ನಮ್ಮ ಜನಪದರು ದೇಹದ ಆರೋಗ್ಯವನ್ನು ಸಮತೋಲನದಲ್ಲಿಡಲು ಹಬ್ಬಗಳಲ್ಲಿ ಒಂದೊಂದು ರೀತಿಯ ವಸ್ತುಗಳನ್ನು ಬಳಸುವಂತೆ ಮಾಡಿದ್ದಾರೆ. ಇದು ಅವರ ದೂರದೃಷ್ಟಿಗೆ ಉತ್ತಮ ನಿದರ್ಶನ.

ಸಂಕ್ರಾಂತಿ ಹಬ್ಬದ ಆಚರಣೆಯ ಮೂಲ ಉದ್ದೇಶ ಒಂದೇ ಆದರೂ, ಆಚರಿಸುವ ವಿಧಿ ವಿಧಾನಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುತ್ತಾ ಹೋಗುತ್ತದೆ. ಕೆಲವು ಕಡೆ ಮಕ್ಕಳನ್ನು ಕೂರಿಸಿ ಎಲಚಿ ಹಣ್ಣೂ, ಅವರೆಕಾಯಿ, ಕಡಲೆ, ಕಡ್ಲೇಕಾಯ್, ಕಬ್ಬಿನ ಚೂರು, ಬೆಲ್ಲ ಇವುಗಳನ್ನು ಬೆರೆಸಿ ಪಾವಿನಲ್ಲಿ ತುಂಬಿ ಮುತ್ತೈದೆಯರು ತಲೆಯ ಮೇಲೆ ಸುರಿದು ಶುಭವಾಗಲೆಂದು ಹರಸುತ್ತಾರೆ. ಹೀಗೆ ಮಾಡುವುದರಿಂದ ಮಕ್ಕಳಿಗೆ ಬರಬಹುದಾದ ಪೀಡೆ ತೊಲಗುತ್ತದೆ ಎಂಬ ನಂಬಿಕೆ. ಆಪ್ತರಿಗೆ ಎಲೆ ಅಡಿಕೆ, ಕಬ್ಬಿನ ತುಂಡು, ಎಳ್ಳು ಬೆಲ್ಲವನ್ನು ಕೊಡುವ ಸಂಪ್ರದಾಯ.

ಹೊಸದಾಗಿ ಮದುವೆಯಾದ ಹೆಣ್ಣುಮಕ್ಕಳು ಮೊದಲ ಸಂಕ್ರಾಂತಿಯಿಂದ ಪ್ರಾರಂಭಿಸಿ ಐದು ವರ್ಷಗಳ ಕಾಲ ಎಳ್ಳು, ಬಾಳೆ ಹಣ್ಣು, ಕೊಬ್ಬರಿ ಬಟ್ಟಲು, ಕಬ್ಬು, ಮಣ್ಣಿನ ಕುಡಿಕೆ, ಧಾನ್ಯಗಳು ಇವುಗಳಿಂದ ಕೂಡಿದ ಬಾಗಿನವನ್ನು ಮೂರು ಅಥವಾ ಐದು ಜನ ಮುತ್ತೈದೆಯರಿಗೆ ಕೊಡುವ ಪದ್ಧತಿ. ವರ್ಷದಿಂದ ವರ್ಷಕ್ಕೆ ಪದಾರ್ಥಗಳ ಪ್ರಮಾಣವನ್ನು ಐದರಂತೆ ಹೆಚ್ಚಿಸುತ್ತಾರೆ. ಚೊಚ್ಚಲು ಮಗುವನ್ನು ಹಡೆದ ತಾಯಂದಿರು ಗಂಡು ಮಗುವಾದರೆ ಕೃಷ್ಣನ ಬೆಳ್ಳಿ ವಿಗ್ರಹ ವನ್ನು, ಹೆಣ್ಣು ಮಗುವಾದರೆ ಬೆಳ್ಳಿಯ ಬಟ್ಟಲನ್ನು ಎಳ್ಳಿನ ಜೊತೆ ಬೀರುತ್ತಾರೆ. ಆದರೆ ಈ ಸಂಪ್ರದಾಯ ಬರು ಬರುತ್ತಾ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿದೆ.

ಸಂಕ್ರಾಂತಿ ಹಬ್ಬ ಇನ್ನೂ ಒಂದು ವಾರ ಇರುವಾಗಲೇ ಹೆಣ್ಣು ಮಕ್ಕಳು ಹಬ್ಬದ ಸಿದ್ಧತೆಯಲ್ಲಿ ತೊಡಗುತ್ತಾರೆ. ಕರಿಯ ಎಳ್ಳನ್ನು ತಂದು ಕಲ್ಲು ಮಣ್ಣನ್ನು ಬೇರ್ಪಡಿಸಿ (ಈಗ ಮಾರುಕಟ್ಟೆಯಲ್ಲಿ ಬಿಳಿ ಎಳ್ಳು ದೊರೆಯುವುದರಿಂದ ಮೊದಲಿನ ಹಾಗೆ ಕಷ್ಟಪಡುವುದು ಕದಿಮೆಯಾಗಿದೆ) ನೀರಿನಲ್ಲಿ ನೆನಸಿ ಬಿಸಿಲಿಯಲ್ಲಿ ಚೆನ್ನಾಗಿ ಒಣಗಿಸಿ ಕಲ್ಲಿನ ಮೇಲೆ ಅಥವಾ ಗೋಣಿ ಚೀಲದ ಮೇಲೆ ಉಜ್ಜಿ ಕರಿಯ ಹೊದಿಕೆಯನ್ನು ಬೇರ್ಪಡಿಸುತ್ತಾರೆ. ಕಡಲೆ ಕಾಯಿ (ಶೇಂಗಾ) ಯನ್ನು ಸುಲಿದು ಬೀಜವನ್ನು ಉರಿದು ಚೆನ್ನಾಗಿ ಉಜ್ಜಿ ಪಪ್ಪುಗಳನ್ನಾಗಿ ಮಾಡಿ ಎಳ್ಳಿಗೆ ಬೆರೆಸಿ ಅದಕ್ಕೆ ಹದವಾದ ಪ್ರಮಾಣದಲ್ಲಿ ಬೆಲ್ಲದ ಚೂರನ್ನು ಬೆರೆಸಿ ಎಳ್ಳು ಬೆಲ್ಲವನ್ನು ತಯಾರಿಸುತ್ತಾರೆ. ಈಗ ಅಂಗಡಿಗಳಲ್ಲಿ ಎಲ್ಲಾ ರೆಡಿಮೇಡ್ ವಸ್ತುಗಳು ದೊರೆಯುವುದರಿಂದ ಕಷ್ಟ ಪಡುವುದು ಕಡಿಮೆಯಾಗಿದೆ.

ಹಬ್ಬವೆಂದರೆ ಕೇಳಬೇಕೆ, ಮನೆಯನ್ನೆಲ್ಲಾ ಒಪ್ಪ ಮಾಡಿ, ಸಾರಿಸಿ, ಮನೆಯ ಒಳಗೆ ಹೊರಗೆ ರಂಗೋಲಿ ಬಿಡುತ್ತಾರೆ. ರಂಗೋಲಿ ಬಿಡುವುದೆಂದರೆ ಹೆಣ್ಣುಮಕ್ಕಳಿಗೆ ಬಲುಹಿಗ್ಗು. ತಮ್ಮಲ್ಲಿರುವ ಪ್ರತಿಭೆಯನ್ನು ಅಭಿವ್ಯಕ್ತಿಪಡಿಸಲು ಸುಸಂದರ್ಭ. ಬಣ್ಣಬಣ್ಣದಿಂದ ಕೂಡಿದ ವಿವಿಧ ರೀತಿಯ ರಂಗೋಲಿ ಯನ್ನು ಬಿಡುತ್ತಾರೆ. ಆಂಧ್ರ ಮತ್ತು ತಮಿಳುನಾಡಿನಲ್ಲಿ ರಂಗೋಲಿಗೆ ವಿಶಿಷ್ಟ ಸ್ಥಾನ. ಡಿಸೆಂಬರ್ ೧೪ರಿಂದ ಜನವರಿ ೧೪ರವರೆಗೆ ಒಂದು ತಿಂಗಳು ಕಾಲ ರಂಗೋಲಿಯ ಸುಗ್ಗಿ. ಈ ಅವಧಿಯಲ್ಲಿ ಕನ್ನಡದಲ್ಲಿ ಪುಷ್ಯಮಾಸವೆಂದೂ, ತೆಲುಗಿನಲ್ಲಿ ಧನುರ್ಮಾಸ, ತಮಿಳಿನಲ್ಲಿ ಮಾರ್ಗಳ ಮಾಸ ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಕೆಲವು ಕಡೆ ಸಂಪ್ರದಾಯಸ್ಥರು ಒಂದು ತಿಂಗಳು ಕಾಲ ಬೆಳಗಿನ ಜಾವ ಕೋಳಿ ಕೂಗುವ ಮುನ್ನ ಮಾಡುತ್ತಾರೆ. ಈ ಮಾಸದಲ್ಲಿ ಪಾರ್ವತಿ ಪರಮೇಶ್ವರರು ದೇಶ ಸಂಚಾರಕ್ಕೆ ಬರುತ್ತಾರೆಂಬ ನಂಬಿಕೆ. ಆಂಧ್ರ ಮತ್ತು ತಮಿಳುನಾಡಿನಲ್ಲಿ ದೇವರ ಮುಂದೆ ಮಡಿಕೆ ರಂಗೋಲಿ ಬಿಡುತ್ತಾರೆ. ಹೊರಗಡೆ ಪೂರ್ವದಿಕ್ಕಿಗೆ ಸಾರಿಸಿ ರಂಗೋಲಿ ಹಾಕಿ ಅದರ ಮೇಲೆ ಒಲೆಯನ್ನು ನಿರ್ಮಿಸಿ, ಮಡಿಕೆಯಲ್ಲಿ 'ಸೀಪೊಂಗಲ್' ಮಾಡಿ ಸೂರ್ಯನಿಗೆ ನೈವೇದ್ಯ ಮಾಡುತ್ತಾರೆ. ಈ ಸಂದರ್ಭದಲ್ಲಿ ಸೂರ್ಯ ಹಾಗೂ ಮಡಿಕೆಯಾಕಾರದಲ್ಲಿ ರಂಗೋಲಿ ಹಾಕುತ್ತಾರೆ.

ನಮ್ಮ ಜನಪದರ ದೃಷ್ಟಿಯಲ್ಲಿ ಸಂಕ್ರಾಂತಿ ಎಂದರೆ ಸಂಕಾಲತಮ್ಮ ಎಂಬ ದೇವತೆಯ ಆರಾಧನೆ. ಆಕೆಯ ವಕ್ರದೃಷ್ಟಿ ಬಿದ್ದ ಕಡೆ ಯಾವುದೇ ವಸ್ತುವಿರಲಿ ಹಾನಿಗೊಳ ಗಾಗಬಹುದೆಂಬ ನಂಬಿಕೆ. ಅದಕ್ಕೆ ಆಕೆಯ ಕೆಟ್ಟ ದೃಷ್ಟಿ ಬೀಳದಿರಲೆಂದು ಭತ್ತ, ರಾಗಿ, ಜೋಳ ಇತ್ಯಾದಿ ಮೆದೆಗಳಿಗೆ, ಮನೆಯ ಬಾಗಿಲುಗಳಿಗೆ, ಕಿಟಕಿ, ಜಂತೆ, ಮುಂತಾದ ಕಡೆ, ಗದ್ದೆ, ಹೊಲಗಳ ಮೂಲೆ ಮೂಲೆಗೂ ಉತ್ತರಾಣಿ, ಬೇವು, ಮಾವಿನ ಸೊಪ್ಪಿನ ಕಟ್ಟನ್ನು ಇಡುತ್ತಾರೆ. ಸಂಕಾಲತಮ್ಮನನ್ನು ಸಂತೃಪ್ತಿಗೊಳಿಸಲು ಈ ಹಬ್ಬದ ಉದ್ದೇಶ ಎಂಬ ಪ್ರತೀತಿ.

ಉತ್ತರ ಕರ್ನಾಟಕದಲ್ಲಿ ಸಂಕ್ರಾಂತಿಯ ಹಬ್ಬದಲ್ಲಿ ರೈತ ಕುಟುಂಬಗಳೆಲ್ಲ ಹೊಳೆಗೆ ಹೋಗಿ ಎಳ್ಳೆಣ್ಣೆ, ಅರಿಶಿಣವನ್ನು ಬೆರೆಸಿ ಮೈಗೆ ಹಚ್ಚಿಕೊಂಡು ಸ್ನಾನ ಮಾಡಬೇಕೆಂಬ ಸಂಪ್ರದಾಯ ಬೆಳೆದು ಬಂದಿದೆ. ಏಕೆಂದರೆ ಈ ಹಬ್ಬದಲ್ಲಿ ಸೂರ್ಯ ದಿಕ್ಕು ಬದಲಿಸುತ್ತಾನೆ. ಮುಂದೆ ಬಿಸಿಲಿನ ಧಗೆ ಹೆಚ್ಚಾಗುತ್ತದೆ. ಆ ಧಗೆಯನ್ನು ತಡೆಯಲು ಮೈಯಲ್ಲಿ ಶಕ್ತಿ ಬೇಕು. ಅದಕ್ಕಾಗಿ ದೇಹದಲ್ಲಿ ಎಣ್ಣೆ ಅಂಶವನ್ನು ಹೆಚ್ಚಿಸಿ ಕೊಳ್ಳಬೇಕು. ಈ ಕಾರಣದಿಂದಲೇ ಈ ಹಬ್ಬದಲ್ಲಿ ಎಳ್ಳೆಣ್ಣೆ ಮತ್ತು ಅರಿಶಿಣ ಹಚ್ಚಿ ಸ್ನಾನ ಮಾಡಿ ಎಳ್ಳಿನಿಂದ ತಯಾರಿಸಿದ ಖಾದ್ಯಗಳನ್ನು ತಿನ್ನುತ್ತಾರೆ.

ರೈತರು ಸಂಕ್ರಾಂತಿ ದಿನದ ಮುಂಜಾನೆಯೇ ಬಂಡಿ ಹೂಡಿಕೊಂಡು ತಮ್ಮ ಕುಟುಂಬ, ಬಂಧು-ಬಳಗದೊಂದಿಗೆ ಹೊಳೆ ದಂಡೆಗೆ ಹೋದರೆ ಸ್ನಾನ ಮುಗಿಸಿ ಭೂತಾಯಿಗೆ ಪೂಜೆ ಸಲ್ಲಿಸಿ ಅಲ್ಲೇ ಊಟವನ್ನು ಮುಗಿಸಿ ಮನೆಗೆ ಹಿಂದಿರುತ್ತಾರೆ. ಈ ಹಬ್ಬದಲ್ಲಿ ಗ್ರಾಮದ ಜನರು ಊರಲ್ಲಿರದೇ ತಮ್ಮ ತಮ್ಮ ಜಮೀನುಗಳಲ್ಲಿ ಸೇರುತ್ತಾರೆ.

ಉತ್ತರ ಕರ್ನಾಟಕದಲ್ಲಿ ಸಂಕ್ರಾಂತಿ ಹಬ್ಬದಲ್ಲಿ ಊಟದ ವೈವಿಧ್ಯತೆಯೂ ಇದೆ. ವಿವಿಧ ತರಕಾರಿಗಳಾದ ಗಜ್ಜರಿ, ಕುಂಬಳ, ಬೀನ್ಸ್, ಕಡ್ಲೆಕಾಯಿಬೀಜ, ಹಸಿ ತರಕಾರಿ ಸೇರಿದಂತೆ 'ಬರ್ತ' ಎಂಬ ಅಡುಗೆ ತಯಾರಿಸುತ್ತಾರೆ. ಇದನ್ನು ಕೆಲವು ಕಡೆ 'ಭೋಗಿ' ಎಂದೂ ಕರೆಯುತ್ತಾರೆ. ಇವುಗಳ ಬಗ್ಗೆ **'ಸಜ್ಜೆ ರೊಟ್ಟಿ ಬರ್ತ ಕೈಗೆ ಬಾಯಿಗೆ ಕುರ್ತ'** ಎನ್ನುವ ಗಾದೆಯ ಮಾತು ಇದೆ. ಇವುಗಳ ಜೊತೆ ಮಾದ್ಲಿ ಮಳಕಿ ಉಸುಳಿಗಳನ್ನು ಮಡುವುದೂ ಉಂಟು.

ದಕ್ಷಿಣ ಕರ್ನಾಟಕದಿಂದ ಬಹುತೇಕ ಕಡೆ ಅವರೆಬೇಳೆ ಕಿಚಡಿ, ಕಾಯಾಲು ಮಾಡುತ್ತಾರೆ. ಜೊತೆಗೆ ಅವರೆಕಾಯಿ ಮತ್ತು ಕಡಲೇ ಕಾಯಿ, ಎಲೆಗೆಣಸನ್ನು ಬೇಯಿಸುತ್ತಾರೆ. ಹಸಿ ಅವರೆಕಾಳಿನಿಂದ ಮೇಲೋಗರ ಮಾಡುತ್ತಾರೆ. ಸಂಕ್ರಾಂತಿ ದಿನ ಎಲಚಿ ಹಣ್ಣು ಮತ್ತು ಸೊಪ್ಪಿನ ಕಡಲೆ ಕಾಯಿ ತಿನ್ನದೆ ಹೋದರೆ ಕತ್ತೆ ಕಿವಿಯಾಗುತ್ತದೆಂಬ ನಂಬಿಕೆಯೂ ಇದೆ.

ತಮಿಳುನಾಡು ಮತ್ತು ಆಂಧ್ರದಲ್ಲಿ ಸಂಕ್ರಾಂತಿಯನ್ನು ಅಬ್ಬೂರಿಯಿಂದ ಆಚರಿಸುತ್ತಾರೆ. ಆಂಧ್ರದಲ್ಲಿ ಶ್ರೀರಾಮನು ರಾವಣನನ್ನು ಕೊಂದು ಸೀತೆಯನ್ನು ಅಯೋಧ್ಯೆಗೆ ಕರೆದು ತಂದ ದಿನವೆಂದು, ರಾವಣನ ಮೇಲಿನ ಕೋಪ, ಸೇಡನ್ನು ತೀರಿಸಿಕೊಳ್ಳಲು ಮನೆ ಮುಂದೆ ಬೆಂಕಿಹಾಕಿ ರಾವಣನ ಪ್ರತಿಕೃತಿಯನ್ನು ದಹನ ಮಾಡುವ ಶಾಸ್ತ್ರ ಮಾಡುತ್ತಾರೆ.

ಹಬ್ಬಗಳೆಂದರೆ ಉಂಡು ಉಟ್ಟು ಉತ್ಸವ ಮಾಡಿ ಕೊಂಡು ನಲಿಯುವುದೆಂದಲ್ಲ. ಹಬ್ಬಗಳು ಮಾನವನ ದುಡಿಮೆಗೆ ಅವನ ಕಷ್ಟಕಾರ್ಪಣ್ಯಗಳಿಗೆ ಒಂದಿಷ್ಟು ವಿದಾಯ ಕೊಟ್ಟು, ಅವನ ಮನಸ್ಸಿಗೆ ನೆಮ್ಮದಿ ಶಾಂತಿ ಸಮಾಧಾನ 'ಗಳನ್ನು ನಿಡುತ್ತವೆ.

ಹಬ್ಬಗಳ ಆಚರಣೆಗಳು ಹಿಂದಿನ ಆಶಯ, ಅವುಗಳ ಮೂಲೋದ್ದೇಶವೇನೇ ಇರಲಿ, ಸಾಂಸ್ಕೃತಿಕ ಪ್ರಯೋಜನ ವನ್ನಾಗಲಿ, ಸಾಮಾಜಿಕ ಸಾರ್ಥಕತೆಯನ್ನಾಗಲಿ, ಧಾರ್ಮಿಕ ಪರಂಪರೆಯ ಮುಂದುವರಿಕೆಯನ್ನಾಗಲಿ ಅಲ್ಲಗಳೆಯು ವಂತಿಲ್ಲ. ಸಮಾಜದಲ್ಲಿ ಭಾವೈಕ್ಯತೆಯನ್ನು ಮೂಡಿಸಲು, ದುಡಿಮೆಯ ಶ್ರಮವನ್ನು ಬಾಳಿನ ಬೇಸರವನ್ನು ಪರಿಹರಿಸಿ ಮನುಷ್ಯನ ಮನಸ್ಸಿಗೆ ಮುದವನ್ನು ನೀಡುವ ಅಮೂಲ್ಯ ಸಾಧನಗಳು.

ಸಂಕ್ರಾಂತಿ ಆಚರಣೆಯ ಮಹತ್ವ ಹಾಗೂ ಉದ್ದೇಶ ವನ್ನು ಕುರಿತು ಜನಪದರು ಅರ್ಥಪೂರ್ಣವಾಗಿ ಆಶಯವನ್ನು ವ್ಯಕ್ತಪಡಿಸಿದ್ದಾರೆ.

**ಮಾವಿನೆಲೆ, ಉಗನಿ, ಉತ್ರಾಣಿ, *ಹೂವ ಪವಣಿಸಿ ಮೇಟಿಗೆ ಬಣವೆಗೆ ಮುಡಿಸೋಣ, ನವಧಾನ್ಯ ಹೆಚ್ಚುತಿರಲೆಂದು ರಾಗೀಯ ಹೆಚ್ಚಾಲಿ, ತೊಗರೀಯ ಹುಲುಸಾಲಿ ಮಿಣಿ ತಗೆಯಲಿ ಧರೆಯು, ಪಶು-ಪಕ್ಷಿಗಳಲ್ಲಿ ಸೊಗವಿರಲಿ, ಬಸವನ ಕುಲಕೆ.***

ಇದು ಎಲ್ಲರ ಆಶಯವೂ ಹೌದು. ಒಟ್ಟಿನಲ್ಲಿ ಕರ್ನಾಟಕದಾದ್ಯಂತ ಸಂತೋಷ, ಸಂಭ್ರಮದಿಂದ ಆಚರಿಸುವ 'ಸುಗ್ಗಿ ಹಬ್ಬ' ಸಂಕ್ರಾಂತಿ ರೈತನ ಪಾಲಿಗೆ ನಿತ್ಯವೂ ಸಂತೋಷ ತರಲಿ, ದೇಶಕ್ಕೆ ಅನ್ನ ನೀಡುವ ಅನ್ನದಾತ ಸುಖವಾಗಿರಲಿ. ರೈತ ಸಮುದಾಯ ಸುಖ ನೆಮ್ಮದಿಯಿಂದ ಇದ್ದರೆ ಇಡೀ ದೇಶವೇ ಸುಖವಾಗಿರುತ್ತದೆ. ಒಟ್ಟಿನಲ್ಲಿ ಸಂಕ್ರಾಂತಿ ಒಂದು ಸಾಂಪ್ರದಾಯದ ಹಬ್ಬ ವಾಗಿರದೆ, ನಮ್ಮ ಸಂಸ್ಕೃತಿಯಲ್ಲಿ ಸ್ವರ್ಗ ನರಕಗಳ ಸಂಬಂಧವನ್ನು ಕಲ್ಪಿಸಿ ಪ್ರೀತಿ, ವಿಶ್ವಾಸಗಳನ್ನು ಬೆಳೆಸುವ ಒಂದು ಪವಿತ್ರ ಕಲ್ಪನೆಯುಳ್ಳ ಹಬ್ಬವಾಗಿದೆ. ನಮ್ಮ ಹೃದಯ ಮಂದಿರದಲ್ಲಿ ಕತ್ತಲನ್ನು ಓಡಿಸಿ ಜ್ಞಾನದ ಜ್ಯೋತಿಯನ್ನು ಹಚ್ಚಿ ಬದುಕನ್ನು ಹಸನುಮಾಡಿಕೊಳ್ಳುವ ದಿವ್ಯ ಸಂದೇಶ ವನ್ನು ಸಂಕ್ರಾಂತಿ ನೀಡುತ್ತದೆ.

*





## ಶ್ರೀ ಅಡವಿಸ್ವಾಮಿಗಳು

- ಚಂದ್ರಶೇಖರ ನಾರಣಪುರ, ಚಿಕ್ಕಮಗಳೂರು.

ಶ್ರೀ ಸಿದ್ಧಗಂಗಾ ಕ್ಷೇತ್ರದ ಆದಿಗುರುಗಳಾದ ಪೂಜ್ಯ ಶ್ರೀ ಸಿದ್ಧೇಶ್ವರ ಶಿವಯೋಗಿಗಳು

ಶ್ರೀ ಅಡವಿಸ್ವಾಮಿಗಳು ಎಲ್ಲಿಯವರು ? ಎಲ್ಲಿಂದ ಆಗಮಿಸಿದರು? ಇವರ ಕಾಲಮಾನ ಯಾವುದು? ಎಂದು ಎದುರಾಗುವ ಹಲವು ಪ್ರಶ್ನೆಗಳನ್ನು ನಮ್ಮ ಮುಂದೆ ಇಟ್ಟು ಕೊಂಡು ಅಡವಿ ಸ್ವಾಮಿಗಳ ಬಗ್ಗೆ ಜನಪದ ಮತ್ತು ಐತಿಹಾಸಿಕ ಕಥೆಗಳ ಆಧಾರದ ಮೇಲೆ ಈ ಲೇಖನವನ್ನು ಸಿದ್ಧಪಡಿಸಲಾಗಿದೆ ಅಡವೀಶ, ಅಡವಿಸಿದ್ಧೇಶ್ವರ, ಅಟವೀಶ್ವರ ಎಂಬ ಹೆಸರುಗಳಿಂದ ಶ್ರೀ ಅಡವಿಸ್ವಾಮಿಗಳನ್ನು ಕರೆಯಲಾಗುತ್ತದೆ.

### ಜನಪದ ಹಿನ್ನಲೆ :

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಶಿವಶರಣರ ಜತೆಯಲ್ಲಿದ್ದ ಶ್ರೀ ರೇಚಪ್ಪ ಎಂಬುವವರು ಶ್ರೀ ಚನ್ನಬಸವಣ್ಣ ನವರ ಜೊತೆಗೂಡಿ ಉಳವಿಗೆ ಬಂದು ನೆಲೆಸಿರುತ್ತಾರೆ. ಶ್ರೀ ಚನ್ನಬಸವಣ್ಣನವರ ಅಪ್ಪಣೆಯಂತೆ ಉಳವಿಯಲ್ಲಿಯೇ ದೀರ್ಘ ಅನುಷ್ಠಾನವನ್ನು ಆಚರಿಸಿ ಯೋಗ ಸಿದ್ಧಿಯನ್ನು ಸಂಪಾದಿಸಿಕೊಂಡಿದ್ದನು. ದೇಹ ದಂಡನೆಯಿಂದ ಯೋಗ ಸಿದ್ಧಿಯನ್ನು ಸಂಪಾದಿಸಿಕೊಂಡಿದ್ದ ಶ್ರೀ ರೇಚಪ್ಪಸ್ವಾಮಿಗಳು ಧರ್ಮ ಮತ್ತು ಯೋಗದಲ್ಲಿ ಅಗಾಧವಾದದ್ದನ್ನು ಸಾಧಿಸ ಬೇಕೆಂಬ ಉತ್ಕಟ ಆಸೆಯಿಂದ ಉಳವಿಯನ್ನು ತೊರೆದು, ಹಿಮಾಲಯದ ಸಾಧಕರ ಜತೆ ಸೇರಲು ಪ್ರಯಾಣ ಬೆಳೆಸಿದರೆಂಬ ಜನಪದ ಕಥೆಯಿಂದ ತಿಳಿದು ಬರುತ್ತದೆ. ಶ್ರೀ ಅಡವೀ ಸ್ವಾಮಿಗಳು ಹಿಮಾಲಯಕ್ಕೆ ಹೋಗಿ ಸಾಧನೆಯ ಸಿದ್ಧಿಯನ್ನು ಸಂಪಾದಿಸಿಕೊಂಡು ಹಿಂದಿರುಗಿದರು. ಗುರುಗಳು ಹಿಂದಿರುಗುವಾಗ ಕುರುಕ್ಷೇತ್ರ, ಕಾಶಿ, ಶ್ರೀಶೈಲ, ಕಲ್ಯಾಣ, ಕಂಚಿ, ಕಾಳಹಸ್ತಿ, ಕುಂಭಕೋಣ, ಭುವನೇಶ್ವರ, ಪುಣ್ಯ ಕಾವೇರಿ, ಮಧುರೆ, ಕೊಡಗು, ಮುಡುಕುತೊರೆ ಮುಂತಾದ ಅನೇಕ ಪುಣ್ಯ ಕ್ಷೇತ್ರಗಲಲ್ಲಿ ಸಂಚರಿಸಿದರು ಎಂದು ಶ್ರೀಮದ್ ಅಟವೀಶ್ವರ ಚರಿತ್ರೆಯಲ್ಲಿ ವರ್ಣಿತವಾಗಿದೆ.

ಈ ರೀತಿ ದೇಶದ ನಾನಾಭಾಗಗಳ ದಂಡಕಾರಣ್ಯಗಳಲ್ಲಿ ಸಂಚರಿಸಿ ದೀರ್ಘ ತಪೋನುಷ್ಠಾನಗೊಂಡು, ಬೆಳಗಾಂ ಜಿಲ್ಲೆ ಗೋಕಾಕು ತಾಲ್ಲೂಕಿನ ಅಂಕಲಗಿಗೆ ಬರುತ್ತಾರೆ. ಶ್ರೀ ರೇಚಪ್ಪಸ್ವಾಮಿಗಳು ನಿರ್ಜನ ಪ್ರದೇಶದ ಅಡವಿಯಲ್ಲಿ ತಪೋನುಷ್ಠಾನ ಕೈಗೊಳ್ಳುತ್ತಿದ್ದ ಕಾರಣ ಇವರಿಗೆ ಅಡವಿ ಸ್ವಾಮಿಗಳು ಎಂದು ಭಕ್ತರು ಕರೆಯತೊಡಗಿದ್ದರಿಂದ ಈ ಹೆಸರೇ ರೇಚಪ್ಪ ಗುರುಗಳಿಗೆ ಖಾಯಂ ಆಗಿ ಉಳಿದು ಕೊಂಡಿತು ಎಂದು ಅಂಕಲಗಿ ಅಡವಿಮಠದ ಪ್ರಕಟಿತ ಕೃತಿ **'ಶ್ರೀ ಅಡವೀಶ್ವರ ಚರಿತ್ರೆ'** ಯಲ್ಲಿ ಉಲ್ಲೇಖಿಸಿಗೊಂಡಿದೆ. ಶ್ರೀ ಅಡವಿ ಸ್ವಾಮಿಗಳು ಹಿಮಾಲಯದಿಂದ ಲೋಕ ಸಂಚಾರ ಮಾಡುತ್ತಾ ಅಂಕಲಗಿಗೆ ಆಗಮಿಸಿ ಇಲ್ಲಿ ಮಠವನ್ನು ಸ್ಥಾಪನೆ ಮಾಡಿ, ವೀರಶೈವ ಧರ್ಮದ ಪ್ರಚಾರ ಕೇಂದ್ರವನ್ನಾಗಿ ಮಾಡಿಕೊಂಡು ಯೋಗ ಸಾಧನೆಯಲ್ಲಿ ತೊಡಗಿರುತ್ತಾರೆ. ಇಲ್ಲಿ ಅನೇಕ ಪವಾಡಗಳನ್ನು ಮಾಡಿ ಭಕ್ತರ ಕಷ್ಟ ಕಾರ್ಪಣ್ಯ ಗಳನ್ನು ದೂರ ಮಾಡಿ, ಮಠವನ್ನು ಬೆಳೆಸಿ ಲೋಕ ಸಂಚಾರಕ್ಕೆಂದು ದಕ್ಷಿಣದ ಕಡೆ ಹೊರಡುತ್ತಾರೆ.

### ಐತಿಹಾಸಿಕ ಹಿನ್ನಲೆ

ಶ್ರೀ ಅಡವಿಸ್ವಾಮಿಗಳು ಗುಬ್ಬಿಗೆ ಆಗಮಿಸಿ ಗೋಸಲ ಶ್ರೀ ಚನ್ನಬಸವೇಶ್ವರ ದೇವಸ್ಥಾನದಲ್ಲಿ ಕೆಲವು ದಿನಗಳು ನೆಲೆಸಿ, ಗುಬ್ಬಿಯ ತೊರೆಯ ದಡದಲ್ಲಿ ತೊರೆ ಮಠವನ್ನು ಸ್ಥಾಪಿಸಿ, ವೀರಶೈವ ಧರ್ಮದ ಬೆಳವಣಿಗೆಗೆ ಸಹಾಯಕ ರಾಗಿದ್ದಾರೆ. ಶ್ರೀ ಅಡವಿ ಸ್ವಾಮಿಗಳು ಒಂದೆಡೆ ನೆಲೆಸದೆ ಸದಾ ಸಂಚಾರ ಮೂರ್ತಿಯಾಗಿ ಗುಬ್ಬಿಯಿಂದ ಸಿದ್ಧಗಂಗಾ ಕ್ಷೇತ್ರಕ್ಕೆ ಬರುವ ವೇಳೆಗಾಗಲೇ (೧೮೬೫) ಬಂದ ಶ್ರೀ

ಸಿದ್ಧಲಿಂಗಸ್ವಾಮಿಗಳು ಎಂಬುವರು ಇಲ್ಲಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಇವರು ಅನುಷ್ಠಾನ ಮೂರ್ತಿಗಳಾಗಿ ಸದಾ ಧ್ಯಾನಮಗ್ನರಾಗಿ ಮಠದ ಅಭಿವೃದ್ಧಿಯ ಕಡೆಗೆ ಗಮನಕೊಡದ ಕಾರಣ ಪೂರ್ವ ಇತಿಹಾಸವುಳ್ಳಂತಹ ಸಿದ್ಧಗಂಗಾ ಮಠವು ಜೀರ್ಣಾವಸ್ಥೆಗೆ ಬಂದಿತ್ತು. ಶ್ರೀ ಅಡವಿ ಸ್ವಾಮಿಗಳು ಸಿದ್ಧಗಂಗಾ ಮಠಕ್ಕೆ ಬಂದವರೇ ದಾಸೋಹ ಕ್ರಿಯೆಗೆ ಹೆಚ್ಚು ಒತ್ತು ಕೊಟ್ಟು ದುಡಿಯ ತೊಡಗಿದರು. ಮುಪ್ಪಿನಲ್ಲಿದ್ದ ಶ್ರೀ ಸಿದ್ಧಲಿಂಗಸ್ವಾಮಿಗಳು ಶ್ರೀ ಅಡವಿ ಸ್ವಾಮಿಗಳ ಕ್ರಿಯಾಶೀಲ ಗುಣಗಳನ್ನು ಗಮನಿಸಿ, ಮಠದ ಪೂರ್ಣ ಅಧಿಕಾರವನ್ನು ಶ್ರೀ ಅಡವಿ ಸ್ವಾಮಿಗಳಿಗೆ ಒಪ್ಪಿಸಿದರು.

ಶ್ರೀ ಅಡವಿ ಸ್ವಾಮಿಗಳು ಮಠದ ಸಮಸ್ತ ಆಡಳಿತವನ್ನು ನೋಡಿಕೊಳ್ಳುತ್ತ ಗವಿಯೊಂದರಲ್ಲಿ ದೀರ್ಘ ಅನುಷ್ಠಾನ ಗೊಂಡು ಈ ತಪೋಭೂಮಿಯಲ್ಲಿ ಧರ್ಮ ಮತ್ತು ದಾಸೋಹ ಬೆಳೆಯಲು ಪ್ರೇರಕ ಶಕ್ತಿಯಾದರು. ದಾಸೋಹ ಕ್ರಿಯೆಗಾಗಿ 'ಇಂದು ಹಾಕಿದ ಬೆಂಕಿಮುಂದೆ ಎಂದೂ ಆರದಿರಲಿ, ಇಂದು ಪ್ರಾರಂಭಗೊಂಡ ಅನ್ನ ದಾಸೋಹ ಎಂದಿಗೂ ನಿಲ್ಲದಿರಲಿ' ಎಂದು ಹಾರೈಸಿ ಅನ್ನ ದಾಸೋಹ ಕ್ರಿಯೆಯನ್ನು ಪ್ರಾರಂಭ ಮಾಡಿದರು. ಅಂದು ಪ್ರಾರಂಭ ಗೊಂಡ ಅನ್ನ ದಾಸೋಹ ಕ್ರಿಯೆ ಅಂದಿನಿಂದ ಹತ್ತು ಪಟ್ಟು, ನೂರು ಪಟ್ಟು ಬೆಳೆದು ಈಗ ಸಾವಿರ ಪಟ್ಟು ಬೆಳೆದು ಮಹಾ ದಾಸೋಹ ಕ್ಷೇತ್ರವಾಗಿ ವಿಶ್ವಮಾನ್ಯತೆಯನ್ನು ಪಡೆದು ಕೊಂಡಿದೆ. ಇಂತಹ ಒಂದು ಸಾಧನೆಯ ಪ್ರೇರಕರಾದ ಶ್ರೀ ಅಡವಿ ಸ್ವಾಮಿಗಳು ಸಿದ್ಧಗಂಗಾ ಕ್ಷೇತ್ರಕ್ಕೆ ಶ್ರೀ ಉದ್ದಾನ ಶಿವಯೋಗಿಗಳನ್ನು ನೆಲೆಗೊಳಿಸಿ ಭಕ್ತರ ಅಪೇಕ್ಷೆಯ ಮೇರೆಗೆ ಗುಬ್ಬಿಗೆ ಪುನಃ ಆಗಮಿಸುತ್ತಾರೆ.

ಗುಬ್ಬಿಯ ತೋರೆಮಠಕ್ಕೆ ಆಗಮಿಸಿದ ಶ್ರೀ ಅಡವಿಸ್ವಾಮಿಗಳು ಗೋಸಲ ಚನ್ನಬಸವೇಶ್ವರರ ಜಾತ್ರೆಯನ್ನು ಬಹಳ ವೈಭವ ಯುತವಾಗಿ ಆಚರಿಸಿದರು. ಜನರು ಈ ಜಾತ್ರೆಗೆ 'ನ ಭೂ ತೋ ನ ಭವಿಷ್ಯತಿ' ಎಂಬಂತೆ ಸೇರತೊಡಗಿ ದಾಖಲೆ ಯನ್ನೇ ನಿರ್ಮಿಸಿದರು. ಜಾತ್ರೆ ನಡೆದ ಕೆಲವೇ ದಿನಗಳ ನಂತರ ಶ್ರೀ ಚನ್ನಬಸವೇಶ್ವರರಿಗೆ ಬೆಳ್ಳಿ ಪಲ್ಲಕ್ಕಿಯನ್ನು ಮಾಡಿಸಿಕೊಡಬೇಕೆಂಬ ಹಂಬಲ ತೊಟ್ಟು ಗುಬ್ಬಿಯ ಭಕ್ತರಲ್ಲಿ ಈ ವಿಚಾರವನ್ನು ತಿಳಿಸುತ್ತಾರೆ. ಗುಬ್ಬಿಯ ಭಕ್ತರು ತಮ್ಮ ಶಕ್ತಿಯನ್ನು ಮೀರಿ ಬೆಳ್ಳಿಯನ್ನು ನೀಡುವುದಾಗಿ ಭರವಸೆ ಕೊಡುತ್ತಾರೆ. ಬೆಳ್ಳಿ ಕೊಡುವುದಾಗಿ ಭರವಸೆಯನ್ನು ನೀಡಿ ಹೋದ ಭಕ್ತರು ಮಠದ ಕಡೆಗೆ ಸುಳಿಯದೇ ಹೋದಾಗ ಪುನಃ ಶ್ರೀ ಅಡವಿ ಸ್ವಾಮಿಗಳೇ ವಾಗ್ದಾನ ಮಾಡಿ ಹೋದ ಭಕ್ತರಿಗೆ ಕರೆ ಕಳಿಸುತ್ತಾರೆ. ಈ ಕರೆಗೂ ಮನ್ನಣೆಯನ್ನು ಕೊಡದ ಕೆಲವು ಭಕ್ತರು ಮಠದ ಕಡೆ ಸುಳಿಯಲಿಲ್ಲ. ಇದರಿಂದ ಬೇಸರಗೊಂಡ ಅಡವಿ ಸ್ವಾಮಿಗಳು 'ಗುಬ್ಬಿಯ ಜನ ಗುರು ದ್ರೋಹಿಗಳು' ಎಂದು ಶಾಪಕೊಟ್ಟು ಹಿಂದೆಂದೂ ಮಾಡಿಸದಂತಹ ಹಾಗೂ ಹೊರಲಾರದಂತಹ ಬೆಳ್ಳಿ ಪಲ್ಲಕ್ಕಿಯನ್ನು ಸ್ವತಃ ತಾವೇ ಮಾಡಿಸಲು ನಿರ್ಧರಿಸಿ, ಗುಬ್ಬಿಯ ಕೆಲವೇ ಭಕ್ತರು ದಾನವಾಗಿ ತಂದುಕೊಟ್ಟ ಬೆಳ್ಳಿಯ ಜೊತೆಗೆ ತಮ್ಮ ಪಾಲಿನ ಬೆಳ್ಳಿಯನ್ನು ಹಾಕಿಕೊಂಡು ಪಲ್ಲಕ್ಕಿಯನ್ನು ಮಾಡಿಸಿ ಅರ್ಪಿಸುತ್ತಾರೆ. ಅಂದು ಶ್ರೀ ಅಡವಿ ಸ್ವಾಮಿಗಳು ಮಾಡಿಸಿ ಕೊಟ್ಟ ಬೆಳ್ಳಿ ಪಲ್ಲಕ್ಕಿಯು ಇಂದಿಗೂ ಶ್ರೀ ಚನ್ನಬಸವೇಶ್ವರ ದೇವಾಲಯದಲ್ಲಿ ನೋಡಸಿಗುತ್ತಿದೆ.

ಶ್ರೀ ಅಡವಿ ಸ್ವಾಮಿಗಳು ಗುಬ್ಬಿಯನ್ನು ತಮ್ಮ ಧರ್ಮ ಪ್ರಚಾರದ ಕೇಂದ್ರ ಬಿಂದುವನ್ನಾಗಿಸಿಕೊಂಡು ಕುಣಿಗಲ್ಲು, ಚಿಕ್ಕತೊಟ್ಲುಕೆರೆ ಮುಂತಾದ ಕಡೆಗಳಲ್ಲಿ ಕೆಲವು ದಿನ ನೆಲೆನಿಂತು ತಪೋನುಷ್ಠಾನವನ್ನು ಕೈಗೊಳ್ಳುತ್ತಿದ್ದರು. ಇದರಲ್ಲಿ ಶ್ರೀ ಅಡವಿ ತಪೋಕ್ಷೇತ್ರಗಳಲ್ಲಿ ಒಂದಾಗಿ ಬೆಳೆಯಿತು. ಶ್ರೀ ಅಡವಿಸ್ವಾಮಿಗಳು ಈ ಕ್ಷೇತ್ರಕ್ಕೆ ಆಗಿಂದಾಗ್ಗೆ ಭೇಟಿಕೊಟ್ಟು ತಪೋನುಷ್ಠಾನ ಕೈಗೊಂಡು ಯೋಗಸಿದ್ಧಿಯನ್ನು ಸಂಪಾದಿಸಿಕೊಂಡು ಬರುತ್ತಿದ್ದರು.

### ಶ್ರೀ ಅಡವಿ ಸ್ವಾಮಿಗಳ ತಪೋಕ್ಷೇತ್ರ :

ತುಮಕೂರು ತಾಲ್ಲೂಕಿನ ಚಿಕ್ಕತೊಟ್ಲುಕೆರೆಯು ತಾಲ್ಲೂಕು ಕೇಂದ್ರದ ಉತ್ತರಕ್ಕೆ ಹದಿನೆಂಟು ಕಿ.ಮೀ. ದೂರ ದಲ್ಲಿದೆ. ಈ ಗ್ರಾಮದ ಈಶಾನ್ಯ ಭಾಗಕ್ಕೆ ಒಂದುವರೆ ಕಿ.ಮೀ ದೂರದಲ್ಲಿ ಶ್ರೀ ಅಡವಿ ಸ್ವಾಮಿಗಳು ತಪೋನುಷ್ಠಾನ





ಕೈಗೊಳ್ಳುತ್ತಿದ್ದ ಗವಿಕ್ಷೇತ್ರವು ಸ್ಥಾಪನೆಗೊಂಡಿದೆ. ಶ್ರೀ ಅಡವಿ ಸ್ವಾಮಿಗಳು ಈ ಕ್ಷೇತ್ರಕ್ಕೆ ಬರುವ ಮುನ್ನ ಶ್ರೀ ಓಂಕಾರ ಸ್ವಾಮಿಗಳು ಈ ಸ್ಥಳದಲ್ಲಿ ಅನುಷ್ಠಾನವನ್ನು ಕೈಗೊಂಡು ಮಠವನ್ನು ಸ್ಥಾಪನೆ ಮಾಡಿದ್ದರು. ಶ್ರೀ ಓಂಕಾರೇಶ್ವರರ ನಂತರ ಶ್ರೀ ಜಡೆಸ್ವಾಮಿಗಳು ಅಧಿಕಾರಕ್ಕೆ ಬಂದು ಈ ಧಾರ್ಮಿಕ ಕಾರ್ಯಗಳು ನಿಲ್ಲದಂತೆ ನೋಡಿಕೊಂಡು, ಜನರನ್ನು ಜಾಗೃತರನ್ನಾಗಿ ಮಾಡಿ ಈ ಕ್ಷೇತ್ರದಲ್ಲಿಯೇ ಲಿಂಗೈಕ್ಯರಾಗಿರುತ್ತಾರೆ. ಇಂತಹ ಯೋಗ ಭೂಮಿಯಲ್ಲಿ ಶ್ರೀ ಅಡವಿಸ್ವಾಮಿಗಳು ನೈಸರ್ಗಿಕವಾಗಿ ರಚನೆಗೊಂಡಿದ್ದ ಗವಿಯಲ್ಲಿ ತಪೋನುಷ್ಠಾನ ಕೈಗೊಂಡು ಈ ಧರ್ಮಕ್ಷೇತ್ರ ವನ್ನು ಬೆಳೆಸಿದರು. ಅಲ್ಲದೆ ತಮ್ಮ ಕರಕಮಲ ಸಂಜಾತರಾದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಗಳಿಗೆ ಅನುಗ್ರಹವನ್ನು ನೀಡಿ ಮಠವನ್ನು ಪುನರ್ ಸ್ಥಾಪಿಸಿದ್ದರು.

ಶ್ರೀ ಅಡವಿ ಸ್ವಾಮಿಗಳು ಈ ಕ್ಷೇತ್ರದಲ್ಲಿ ನೆಲೆನಿಂತ ಸಂದರ್ಭದಲ್ಲಿ ಒಮ್ಮೆ ಇಲ್ಲಿಗೆ ಸಮೀಪದ ಕೆಸ್ತೂರಿಗೆ ಆಗಮಿಸಿ ಇಲ್ಲಿನ ಶ್ರೀ ವೀರಭದ್ರಸ್ವಾಮಿ ದೇವಸ್ಥಾನದಲ್ಲಿ ತಪೋನುಷ್ಠಾನ ಕೈಗೊಂಡಿರುತ್ತಾರೆ. ಈ ಸಂದರ್ಭದಲ್ಲಿ ಇಲ್ಲಿನ ಮಕ್ಕಳಿಗೆ ಜ್ವರದ ಬಾಧೆ ಕಾಣಿಸಿಕೊಂಡ ಸಂದರ್ಭದಲ್ಲಿ ಇಲ್ಲಿನ ಮುರಿಗೆಪ್ಪ ಎಂಬುವವರು ಮಕ್ಕಳನ್ನೆಲ್ಲಾ ಒಂದೆಡೆಗೆ ತಮಗೆ ತಿಳಿದಿದ್ದ ಹಳ್ಳಿ ವೈದ್ಯ ಪದ್ಧತಿಯಲ್ಲಿ ಮಕ್ಕಳಿಗೆ ಉಪಚಾರವನ್ನು ನೀಡುತ್ತಿದ್ದರು. ಆದರೂ ಮಕ್ಕಳಿಗೆ ಗುಣಮುಖವಾಗದೇ ಬಳಲುತ್ತಿದ್ದವು. ಈ ಸಂದರ್ಭದಲ್ಲಿ ಶ್ರೀ ವೀರಭದ್ರಸ್ವಾಮಿ ದೇವಾಲಯದಲ್ಲಿ ಅಡವಿ ಸ್ವಾಮಿಗಳು ತಪೋನುಷ್ಠಾನ ಕೈಗೊಂಡ ವಿಚಾರ ತಿಳಿದು ಮುರಿಗೆಪ್ಪನವರು ದೇವಸ್ಥಾನಕ್ಕೆ ಆಗಮಿಸುತ್ತಾರೆ. ತಪೋನುಷ್ಠಾನ ಕೈಗೊಂಡಿದ್ದ ಶ್ರೀ ಅಡವಿ ಸ್ವಾಮಿಗಳನ್ನು ಎಚ್ಚರಿಸಿ ನಮಸ್ಕರಿಸಿ 'ಮಹಾಮಹಿಮರಿಗೆ ತೊಂದರೆ ಕೊಡುತ್ತಿರುವುದಕ್ಕೆ ಕ್ಷಮಿಸಬೇಕು' ಎಂದು ಹೇಳುತ್ತಾರೆ. ಆಗ ಶ್ರೀ ಅಡವಿ ಸ್ವಾಮಿಗಳು ತಪೋಭಂಗಿಯಿಂದ ಎಚ್ಚೆತ್ತು 'ಅಯ್ಯೋ ಮರುಳೇ ಲೋಕೋದ್ಧಾರವೇ ನಮ್ಮ ಕೆಲಸ, ಕ್ಷಮೆಯಾಚನೆ ಏತಕ್ಕೆ ನಮ್ಮಿಂದ ಏನಾಗಬೇಕು ಎಂದು ಹೇಳು' ಎಂದು ಮುರಿಗಪ್ಪನನ್ನು ವಿಚಾರಿಸಿ, ಜ್ವರದಿಂದ ಬಳಲಿದ ಮಕ್ಕಳಿಗೆ ತಮ್ಮ ತಪೋಶಕ್ತಿಯಿಂದ ಔಷದೋ ಪಚಾರವನ್ನು ಮಾಡಿ ಗುಣಮುಖರಾಗುವಂತೆ ಮಾಡುತ್ತಾರೆ. ಈ ರೀತಿ ಈ ಪ್ರಾಂತ್ಯದ ನಾನಾ ಭಾಗಗಳಲ್ಲಿ ಅನೇಕ ಪವಾಡಗಳನ್ನು ಮಾಡಿ ಜನಜಾಗೃತಿಯನ್ನು ಉಂಟು ಮಾಡಿದ್ದ ಶ್ರೀ ಅಡವಿ ಸ್ವಾಮಿಗಳು ಸಮಾಜವು ನೈತಿಕ ನೆಲೆಗಟ್ಟಿನ ಮೇಲೆ ರೂಪುಗೊಳ್ಳುವಂತೆ ಮಾಡಿದ್ದರು.

### ಗುಬ್ಬಿಯಲ್ಲಿ ಕೈಗೊಂಡ ಕಾರ್ಯಗಳು :

ಶ್ರೀ ಅಡವಿ ಸ್ವಾಮಿಗಳು ಗುಬ್ಬಿಗೆ ಬಂದು ನೆಲೆನಿಂತು ಶ್ರೀ ಚನ್ನಬಸವೇಶ್ವರ ದೇವಸ್ಥಾನದ ಅಭಿವೃದ್ಧಿಗೆ ಒಂದಲ್ಲ ಒಂದು ಕಾರ್ಯಕ್ರಮವನ್ನು ರೂಪಿಸುತ್ತಿದ್ದರು. ಶ್ರೀ ಅಡವಿ ಸ್ವಾಮಿಗಳು ಚಿಕ್ಕತೊಟ್ಲುಕೆರೆ ಮತ್ತು ಕೆಸ್ತೂರುಗಳಲ್ಲಿ ಅನುಷ್ಠಾನ ಗೊಂಡು ಗುಬ್ಬಿಗೆ ಬಂದ ಮೇಲೆ ಶ್ರೀ ಚನ್ನಬಸವೇಶ್ವರ ಸ್ವಾಮಿ ದೇವಸ್ಥಾನದ ಬಳಿ ಸರ್ವರೋಗಗಳ ಪರಿಹಾರಕ್ಕಾಗಿ ಪಾಪನಾಶಿನಿ ಕೊಳವನ್ನು ನಿರ್ಮಿಸಬೇಕೆಂಬ ಸಂಕಲ್ಪ ತೊಟ್ಟರು. ತಮ್ಮ ಸಂಕಲ್ಪವನ್ನು ತಿಳಿಸಲು ಗ್ರಾಮದ ಮುಖಂಡ ರನ್ನೆಲ್ಲಾ ಕರೆಸಿ ಕಾಯಕವಿಲ್ಲದೆ ಕುಳಿತಿರುವ ಗುಬ್ಬಿಯ ಜನರಿಗೆ ಕಾಯಕವನ್ನು ಕಲ್ಪಿಸಲು ಹಾಗೂ ಬಸವೇಶ್ವರ ದೇವಸ್ಥಾನದ ಬಳಿ ಪಾಪನಾಶಿನಿ ಕೊಳವನ್ನು ಸ್ಥಾಪಿಸಿದರೆ ಒಳ್ಳೆಯದು, ಈ ಕಾರಣಕ್ಕಾಗಿ ಕಲ್ಯಾಣಿಯ ರೂಪುರೇಷೆಯನ್ನು ತಯಾರು ಮಾಡಿಕೊಳ್ಳಲಾಗಿದೆ. ಗುಬ್ಬಿಯ ಭಕ್ತರು ಸ್ಪಂದಿಸಲಿ, ಬಿಡಲಿ ಈ ಕೆಲಸವನ್ನು ಪೂರೈಸಲಾಗುತ್ತದೆ ಎಂದು ಅಪ್ಪಣೆಯನ್ನು ಕೊಟ್ಟರು.

### ಜೀವಂತ ಸಮಾಧಿಗೆ ಸಿದ್ಧತೆ :

ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಧರ್ಮ ಮತ್ತು ದಾಸೋಹದ ಕ್ಷೇತ್ರವನ್ನಾಗಿ ರೂಪಿಸಿದ ಶ್ರೀ ಅಡವಿಸ್ವಾಮಿಗಳು ಗುಬ್ಬಿಯ ತೋರೆಮಠದಲ್ಲಿ ದಾಸೋಹ ಕ್ರಿಯೆಗಳು ಶಾಶ್ವತವಾಗಿ ನಡೆಯ ಬೇಕೆಂಬ ಹಂಬಲದಿಂದ ನಿತ್ಯ ದಾಸೋಹದ ಕ್ರಿಯೆಗೆ ಚಾಲನೆಯನ್ನು ಕೊಟ್ಟರು. ತಮ್ಮ ಕೊನೆಯ ದಿನಗಳ ಕಾರ್ಯಕ್ಷೇತ್ರ ವಾಗಿ ರೂಪುಗೊಂಡ ಗುಬ್ಬಿ ಕ್ಷೇತ್ರದಲ್ಲಿ ಜೀವಂತ ಸಮಾಧಿಯಾಗ ಬೇಕೆಂಬ ಹಂಬಲದಿಂದ ತೋರೆಮಠದ ಮುಂಭಾಗದ ಆವರಣ ದಲ್ಲಿ ತಮಗಾಗಿ ಸಮಾಧಿಯನ್ನು ನಿರ್ಮಿಸಿಕೊಂಡರು. ತಮ್ಮ ಕರಕಮಲಸಂಜಾತರಾಗಿದ್ದ ಶ್ರೀ ಚಿಕ್ಕಅಡವಿಸ್ವಾಮಿಗಳು (ಶ್ರೀ ಸಿದ್ಧವೀರಸ್ವಾಮಿಗಳು) ಮತ್ತು ಉದ್ದಾನ ಸ್ವಾಮಿಗಳವರನ್ನು ಕರೆಸಿ ತಾವು ಜೀವಂತ ಸಮಾಧಿಯನ್ನು ನಿರ್ಮಿಸಿಕೊಂಡ ಶ್ರೀ ಅಡವಿ ಸ್ವಾಮಿಗಳು ಯಾರೊಂದಿಗೂ ಹೆಚ್ಚು ಬೆರೆಯದೆ ದೀರ್ಘ ತಪೋನುಷ್ಠಾನಕ್ಕೆ ಕುಳಿತರು. ಇಂತಹ ದಿನಗಳಲ್ಲಿ ಶ್ರೀ ಅಡವಿ ಸ್ವಾಮಿಗಳನ್ನು ತಮ್ಮ ಮನೆಗೆ ಆಮಂತ್ರಿಸಲೆಂದು ಚಿಕ್ಕತೊಟ್ಲುಕೆರೆ ಪ್ರಾಂತ್ಯದ ಭಕ್ತನೊಬ್ಬ ಆಗಮಿಸುತ್ತಾನೆ. ಭಕ್ತನ ಅಪೇಕ್ಷೆಯನ್ನು ನಿರಾಕರಿಸಲಾಗದ ಶ್ರೀ ಅಡವಿ ಸ್ವಾಮಿಗಳು ಕಾರ್ತೀಕ ಮಾಸ ದೊಳಗೆ ನಾವು ಈ ಮಠದಲ್ಲಿಯೇ ಇರಬೇಕು. ಅಷ್ಟರೊಳಗಾಗಿ ನಮ್ಮನ್ನು ಮಠಕ್ಕೆ ತಲುಪಿಸಬೇಕು ಎಂದು

ಅಪ್ಪಣೆಯನ್ನು ಕೊಟ್ಟು ಭಕ್ತನ ಮನೆಗೆ ಪೂಜೆಗೆಂದು ಹೊರಡುತ್ತಾರೆ.

**ಬದಲಾದ ವಿಧಿಯ ಲೀಲೆ :**

ಭಕ್ತನ ಮನೆಯಲ್ಲಿ ಪೂಜೆಯನ್ನು ಮುಗಿಸಿಕೊಂಡು ಗುಬ್ಬಿಗೆ ಹಿಂದಿರುಗಲು ಪ್ರಯಾಣ ಬೆಳೆಸಿದರು. ಪ್ರಯಾಣ ಮಧ್ಯದಲ್ಲಿ ಗಾಡಿ ಹೊಡೆಯುತ್ತಿದ್ದ ಸೇವಕನನ್ನು ಕುರಿತು 'ಗುರುಕಾರುಣ್ಯ ಕರೆಯುತ್ತಿದೆ. ನಾನು ಬೇಗ ಗುಬ್ಬಿಯನ್ನು ತಲುಪಬೇಕಾಗಿದೆ ಎತ್ತುಗಳನ್ನು ಚುರುಕುಗೊಳಿಸು' ಎಂದು ಶ್ರೀ ಅಡವಿ ಸ್ವಾಮಿಗಳು ಹೇಳಿದರು. ಪುನಃ ಗಾಡಿಯನ್ನು ಹೊಡೆಯುತ್ತಿದ್ದ ಸೇವಕನನ್ನು ಕುರಿತು 'ನಾವು ಗಾಡಿಯಲ್ಲಿಯೇ ಧ್ಯಾನಾಸಾಕ್ತರಾಗಿ ಕುಳಿತಿರುತ್ತೇವೆ. ಗುಬ್ಬಿ ಬಂದ ಮೇಲೆ ಎಚ್ಚರಿಸು, ದಾರಿಯ ಮಧ್ಯದಲ್ಲಿ ಎಲ್ಲಿಯಾದರೂ ಎಚ್ಚರಿಸೀಯೆ ಜೋಕೆ' ಎಂದು ಗುರುಗಳು ಎಚ್ಚರಿಕೆ ಕೊಟ್ಟು ಗಾಡಿಯಲ್ಲಿ ತಪೋಮಗ್ನರಾದರು. ಗಾಡಿ ಹೊಡೆಯುತ್ತಿದ್ದ ಸೇವಕ ಚಿಕ್ಕತೊಟ್ಟಿಲುಕೆರೆಯವನಾಗಿದ್ದು ತನ್ನ ಊರಿನಲ್ಲಿಯೇ ಗುರುಗಳ ಜೀವಂತ ಸಮಾಧಿಯಾದರೆ ನಾನು ಹುಟ್ಟಿದ ಊರಿಗೆ ಕೀರ್ತಿ ಬರುತ್ತದೆ ಎಂಬ ಅಂಧ ಅಭಿಮಾನದಿಂದ ಚಿಕ್ಕತೊಟ್ಲುಕೆರೆಯ ದಾರಿಯಲ್ಲಿ ಬರುತ್ತಿದ್ದ ಗಾಡಿಯನ್ನು ಶ್ರೀ ಅಡವಿ ಸ್ವಾಮಿಗಳು ತಪೋನುಷ್ಠಾನ ಮಾಡುತ್ತಿದ್ದ ಮಠದ ಬಳಿ ತಂದು 'ಗುರುವೇ, ನಾವು ಮಠಕ್ಕೆ ಬಂದು ಸೇರಿದ್ದೇವೆ ಕಣ್ಣುಬಿಡಿ' ಎಂದು ಶ್ರೀ ಅಡವಿ ಸ್ವಾಮಿಗಳವರನ್ನು ಎಚ್ಚರಿಸುತ್ತಾನೆ. ಶ್ರೀ ಅಡವಿ ಸ್ವಾಮಿಗಳು ಕಣ್ಣುಬಿಟ್ಟು ನೋಡುತ್ತಾರೆ. ಗುಬ್ಬಿಯ ತೋರೆಮಠದ ಬದಲಿಗೆ ಚಿಕ್ಕತೊಟ್ಲುಕೆರೆಯ ಮಠ ಕಣ್ಣು ಎದುರಿಗೆ ಇದೆ. 'ಇದೇನು ಗುಬ್ಬಿಯ ತೋರೆಮಠದಲ್ಲಿ ಎಚ್ಚರಿಸುವುದರ ಬದಲು ಇಲ್ಲಿ ಎಚ್ಚರಿಸಿರುವೆ, ನಮ್ಮ ಕಾರ್ಯಕ್ಷೇತ್ರ ವಾದ ಗುಬ್ಬಿಯಲ್ಲಿ ನಾವು ಜೀವಂತ ಸಮಾಧಿಯಾಗಬೇಕು ಎಂಬ ಹಂಬಲ ಹೊಂದಿದ್ದ ನಮ್ಮ ಆಸೆಗೆ ಭಂಗವುಂಟು ಮಾಡಿದೆಯಲ್ಲೋ ಪಾಪಿ ಎಂದು ನಿಂದಿಸಿ, ಗುರುದ್ರೋಹವನ್ನು ಮಾಡಿದ ನಿನ್ನ ವಂಶ ನಾಶವಾಗಲಿ' ಎಂದು ಶಾಪಕೊಟ್ಟು ಗಾಡಿಯಿಂದ ಇಳಿದ ಶ್ರೀ ಅಡವಿ ಸ್ವಾಮಿಗಳು ನೇರವಾಗಿ ತಾವು ತಪೋನುಷ್ಠಾನವನ್ನು ಕೈಗೊಳ್ಳುತ್ತಿದ್ದ ಗವಿಯಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡು ನಿರ್ವಿಕಲ್ಪ ಸಮಾಧಿಯನ್ನು ಹೊಂದುತ್ತಾರೆ.

ನಾಡಿನ ಬೆಳಕಾಗಿದ್ದ ಶ್ರೀ ಅಡವಿಸ್ವಾಮಿಗಳು ೧೯೦೧ರಲ್ಲಿ (ಕಾರ್ತೀಕ ಮಾಸ ಶುಕ್ಲ ಪಕ್ಷದ ದಶಮಿ) ನಿರ್ವಿಕಲ್ಪ ಸಮಾಧಿಯಾಗಿದ್ದರಿಂದ ಚಿಕ್ಕತೊಟ್ಲುಕೆರೆಯು ಧಾರ್ಮಿಕ ಕ್ಷೇತ್ರದಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿತು.

*

## ಹೊಸ ವರ್ಷ ಹರುಷ ತರಲಿ

ನಾಡ ಜನತೆಗೆಯಿಂದು
ಹೊಸವರುಷ ಬಂದಿದೆ
ಎಲ್ಲರ ಮನಸಿಗೆ ಹರುಷ ತರಲಿ
ಓ ಎನ್ನ ಬಾಂಧವರೆ
ಎನ್ನ ಒಡಹುಟ್ಟವರೆ
ಒಂದಾಗಿ ಬಾಳುವ ಒಮ್ಮಸು ಇರಲಿ

ಈ ಯುಗದ ಜನ ಮನಕೆ
ನಗೆಯ ಸುಗ್ಗಿಯ ತರಲಿ
ಹೊಸ ಚಿಗುರು ರಸತುಂಬಿ ಹಿಗ್ಗಿ ಬರುತ
ಕೆಚ್ಚೆದೆಯ ಧೀ ಮನಕೆ
ಮುಕ್ತ ಚೇತನ ಚಲ್ಲಿ
ಕನ್ನಡದ ನಾಡ ಶಿರತುಂಬಿನಿರುತ

ಹಳೆಯದೆಲ್ಲವ ತೊಡೆದು
ಹೊಸತುದೆಲ್ಲವ ಪಡೆದು
ಹಸನಾದ ದಾರಿಯಲಿ ನಡೆವ
ನೊಂದು ಬೆಂದಂಥವರ
ಎದೆಗೆ ತಂಪನು ಕೊಡುತ
ನಡೆವ ಕಾಲಿಗೆ ಮುಳ್ಳಾಗದಿರುವ

ಸಮತೆ ಹಣತಿಯನಿಟ್ಟು
ಪ್ರೇಮ ತೈಲವ ಸುರಿದು
ಭವ್ಯ ನೀಲಾಂಜನೆಯ ದೀಪ ಹಚ್ಚಿ
ಎದೆಗೆ ಎದೆ ಬೆಸೆದೊಸೆದು
ಭಾವ ಬತ್ತಿಯ ತೀಡಿ
ಹೊಂಬೆಳಕ ಶಾಂತಿಯುತ ಧರ್ಮಹೊಚ್ಚಿ

ದ್ವೇಷ ಮತ್ಸರ ಮಡಗಿ
ಸ್ವಾರ್ಥ ಚಿಂತನೆಯಡಗಿ
ನಾವು ಒಂದೆನುತೆಲ್ಲ ಕೈಯ ಮೇಲೆತ್ತಿ
ಹರಿದು ಹೋಗಲಿ ನಮ್ಮ ಎದೆಯ ಕುತ್ಸಿತ-
ಭಾವ ಸತ್ಯ, ಶಾಂತಿ, ಶಮೆ, ದಮೆಯ ಬಿತ್ತಿ.

–ಹುಲ್ಲೂರು ಕೆ. ಶಿವಣ್ಣ





## ಸ್ವರಯೋಗ ಸಿದ್ಧರು

– ಹೆಚ್. ಗಂಗಾಧರನ್, ಮಾಜಿ ಶಾಸಕರು ಮತ್ತು ಖ್ಯಾತ ವಕೀಲರು, ವಿಷ್ಣುವರ್ಧನ ರಸ್ತೆ, ಚಾಮರಾಜನಗರ, ಮೈಸೂರು–೫.



ಅತ್ಯಂತ ಪ್ರಾಚೀನ ಇತಿಹಾಸವುಳ್ಳ ಭಾರತ ಮಾನವನ ಕಲ್ಪನೆಗೆ ವಿರುದ್ಧ ಮಹಾನುಭಾವರಿಗೆ ಜನ್ಮ ವಿತ್ತ ಪುಣ್ಯಭೂಮಿ. ಇಂದು ಜೀವಿಸಿರುವ ಮೇದಾವಿಗಾಗಲಿ ವಿಜ್ಞಾನಿಗಾಗಲಿ ನಿರ್ಧರಿಸಲು ಅಸಾಧ್ಯ ವಾದ ಸಿದ್ಧಿಯನ್ನು ಪಡೆ ದಿದ್ದ ಸಿದ್ಧಪುರುಷರು ಈ ಪುಣ್ಯಭೂಮಿಯಲ್ಲಿ ಜನಿಸಿದ್ದಾರೆ. ಲೌಖಿಕ ಜೀವಿಗಳಿಗೆ ಅರಿವಾಗದ, ಅರ್ಥವಾಗದ ಅಲೌಖಿಕ ಜೀವನವನ್ನು ನಡೆಸಿದ್ದಾರೆ. ಅನುಭಾವಿಗಳ ಸಿದ್ಧಕ್ಷೇತ್ರ ಈ ರಾಷ್ಟ್ರ ಜಗತ್ತು ಅಗೋಚರವಾದ ಭಗವಂತನ ಸೃಷ್ಟಿ. ಈ ಸೃಷ್ಟಿಯನ್ನು ದೈವದ ಅಲೆ ಎಂದು ಜ್ಞಾನಿಗಳು ಅರ್ಥೈಸಿದ್ದಾರೆ. ಅದನ್ನು ವೈಜ್ಞಾನಿಕವಾಗಿ ಸಿದ್ಧಪಡಿಸಲು ಅನೇಕ ಪ್ರಯತ್ನ ನಡೆದಿದೆ. ಆದರೆ ಅವೆಲ್ಲಾ ವಿಫಲವಾಗಿದೆ. ದೈವ ಎಂಬುದು ಅಗೋಚರವಾದ ಅತಿ ರಹಸ್ಯವಾದ ಒಂದು ತತ್ವ. ಈ ತತ್ವದಿಂದಲೇ ಜಗತ್ತು ಸೃಷ್ಟಿಯಾಗಿದೆ. ಅವನಿಗೆ ಈ ಸೃಷ್ಟಿಯಲ್ಲಿ ಕಾಣುವ ವಿಶಿಷ್ಟಗಳು ರಹಸ್ಯವಾಗಿಯೇ ಉಳಿದಿದೆ. ನಾವು ದಿನನಿತ್ಯವೂ ಕಾಣುವ ಅನುಭವಿಸುವ ಅನೇಕ ಸಂಗತಿಗಳೇ ಇನ್ನೂ ಸಹ ನಿಗೂಢವಾಗಿದೆ. ಒಂದು ಅಣುರೂಪದ ಬೀಜ ಮಣ್ಣಿನಲ್ಲಿ ಸೇರಿ ನೀರು ಮತ್ತು ಬೆಳಕಿನ ಆಶ್ರಯ ಪಡೆದು ದೊಡ್ಡ ಮರವಾಗಿ ಬೆಳೆದು ಲಕ್ಷಾಂತರ ಹಣ್ಣುಗಳನ್ನು ಬಿಟ್ಟು ಕೋಟ್ಯಾಂತರ ಬೀಜಗಳನ್ನು ನೀಡುವುದು ಅತ್ಯಂತ ರಹಸ್ಯ ಘಟನೆ. ಅಣು ಮಾತ್ರದ ಬೀಜದಲ್ಲಿ ಇಂತಹ ಒಂದು ಬೃಹತ್ ಸಂಪತ್ತು ಹೇಗೆ ಅಡಗಿತ್ತೆಂಬುದನ್ನು ವಿಜ್ಞಾನದಿಂದ ತರ್ಕದಿಂದ ಅರ್ಥೈಸಲು ಸಾಧ್ಯವಿಲ್ಲ. ಬಾಹ್ಯ ಸಂಗತಿಯೇ ಈಗಿದೆ ಈ ಸೃಷ್ಟಿಯಲ್ಲಿ ಅತ್ಯಂತ ವಿಶಿಷ್ಟವಾದ ಬೃಹತ್ ಮತ್ತು ಮಹತ್ತಾದ ಸೃಷ್ಟಿ ಅಂದರೆ ಮಾನವ. ಈ ಮಾನವ ಸೃಷ್ಠಿಯಲ್ಲಿ ಎಂತಹ ವೈಶಿಷ್ಟ್ಯವಿದೆ ಎಂಬುದು ಇಂದಿಗೂ ರಹಸ್ಯವಾಗಿದೆ. ಅದನ್ನು ಪರಿಶೀಲಿಸುವ ಪ್ರಯತ್ನ ವಿಜ್ಞಾನಿಗಳಿಂದಲೂ ಮತ್ತು ಸುಜ್ಞಾನಿಗಳಿಂದಲೂ ನಡೆದಿದೆ. ವಿಜ್ಞಾನ ಈ ಸಾಧನೆಯಲ್ಲಿ ವಿಫಲವಾಗಿದೆ ಸುಜ್ಞಾನ ಸಫಲವಾಗಿದೆ. ಹಾಗೆ ಸಫಲತೆಯನ್ನು ಕಂಡವರನ್ನು ಅನುಭಾವಿಗಳು ಮತ್ತು ಸಿದ್ಧ ಪರುಷರೆಂದು ಜಗತ್ತು ಗುರ್ತಿಸಿದೆ.

ಈ ಮಾನವ ಸೃಷ್ಟಿಯಲ್ಲಿ ಅಡಗಿರುವ ಅಮೂಲ್ಯ ವಿಸ್ಮಯಕಾರಿ ಸಂಪತ್ತು ವರ್ಣಿಸಲು ಅಸಾಧ್ಯ. ಮಾನವನಲ್ಲಿ ಇರುವ ಬುದ್ಧಿಯ ಕೇಂದ್ರ ಎಂದರೆ ಮೆದುಳು. ಈ ಮೆದುಳಿನಲ್ಲಿರುವ ಸಂಪತ್ತಿನಲ್ಲಿ ಶೇ.೧೦ ಸಹ ಬೆಳೆಸಿಕೊಳ್ಳುವ ಸಾಮರ್ಥ್ಯವನ್ನು ನಾವು ಬಳಸಿಕೊಳ್ಳಲಿಲ್ಲ ಎಂಬುದೇ ವಿಜ್ಞಾನಿಗಳು ಅಭಿಮತ ಮತ್ತು ಮಾನವನಿಗೆ ಮೂಲ ಸಂಪತ್ತಿನಲ್ಲಿ ಅತೀ ಮುಖ್ಯವಾದುದೆಂದರೆ ಶ್ವಾಸ ಉಚ್ಛ್ವಾಸ ಸಂಪತ್ತು. ಅಂದರೆ ನಾವು ಮೂಗಿನಿಂದ ತೆಗೆದುಕೊಂಡು ಅದರಿಂದ ಹೊರಗೆ ಬಿಡುವ ಗಾಳಿ ಇದೇ ಪ್ರಾಣ. ಈ ಕ್ರಿಯೆ ನಿಂತರೆ ಮಾನವ ದೇಹದಲ್ಲಿರುವ ಇತರೇ ಯಾವ ಸಂಪತ್ತಿಗೆ ಮಾನ್ಯತೆಯು ಇರುವುದಿಲ್ಲ. ಇಡೀ ದೇಹದ ನಿರರ್ಥಕವಾಗುತ್ತದೆ. ವಿಶಾಲ ದೃಷ್ಟಿಯಲ್ಲಿ ಅಪರಿಮಿತವಾದ ವಾಯು ತುಂಬಿದೆ. ಆದ್ದುದರಿಂದ ಅದಕ್ಕೆ ನಾವು ಬೆಲೆಯನ್ನು ಕಟ್ಟುವುದಿಲ್ಲ ಆದರೆ ಬೆಲೆಯನ್ನು ಗಮನಿಸುವುದಿಲ್ಲ. ಪ್ರತಿಯೊಬ್ಬರಿಗೂ ಊಹಿಸಲಾರದಷ್ಟು ವಾಯುವಿಗೆ ಬೆಲೆ ಇದೆ ಎಂಬುದು ಗೊತ್ತಾಗುತ್ತದೆ ಇಲ್ಲಿ. ಒಂದು ಚಾರಿತ್ರಿಕ ಘಟನೆಯನ್ನು ಗಮನಿಸುವುದು ಅಗತ್ಯ. ಜಗತ್ತಿನಲ್ಲಿ ತನ್ನದೇ ಆದ ವಿಶಿಷ್ಠ ವ್ಯಕ್ತಿತ್ವವನ್ನು ರೂಪಿಸಿಕೊಂಡು ವಿಶ್ವವಿಜೇತ ಎಂದು ಖ್ಯಾತನಾದ ಅಲೆಕ್ಸಾಂಡರ್ ತನ್ನ ಚಿಕ್ಕ ವಯಸ್ಸಿನಲ್ಲಿ ಜಗತ್ತಿನ ಬಹು ರಾಷ್ಟ್ರಗಳ ಮೇಲೆ ದಂಡೆತ್ತಿ ಬಂದ. ಅಪ್ರತಿಮ ವೀರರನ್ನು ಸೋಲಿಸಿದ. ಅಪಾರ ಸಂಪತ್ತನ್ನು ಸೂರೆಗೊಂಡ ತನ್ನ ಅರಮನೆಯನ್ನು ಬಿಟ್ಟು ಬಂದು ಬಹುಕಾಲವಾಗಿತ್ತು. ತಾನು ಹಿಂದಿರುಗುವಾಗ ತನ್ನ ತಾಯಿಯನ್ನು ಕಂಡು ತನ್ನ ವಿಜಯದ ವೈಭವವನ್ನು ತಿಳಿಸಬೇಕೆಂದು ಕಾತುರನಾಗಿದ್ದು ತನ್ನ ರಾಜಧಾನಿಯನ್ನು ಮುಟ್ಟಲು ಇನ್ನೂ ಒಂದೆರಡು ದಿನಗಳು ಅವಕಾಶ ಬೇಕಾಗಿತ್ತು. ಅಷ್ಟರಲ್ಲಿ ಅವನಿಗೆ ಉಸಿರಾಟದ ತೊಂದರೆಯುಂಟಾಯಿತು. ತನ್ನ ಸೈನ್ಯದ ಬಳಗದ ಎಲ್ಲರನ್ನೂ ಕೇಳಿಕೊಂಡ; ಅವರು ಕೇಳಿದ ಸಂಪತ್ತು ಅಥವಾ ರಾಜ್ಯವನ್ನಾಗಲೀ ಕೊಡುವುದಾಗಿಯು ಅದಕ್ಕೆ ಬದಲಾಗಿ

ತನ್ನ ತಾಯಿಯನ್ನು ನೋಡುವುದರವರವಿಗೆ ಬದುಕಿರುವಷ್ಟು ಉಸಿರನ್ನು ಕೊಡಬೇಕೆಂದು ಪ್ರಾರ್ಥಿಸಿದ ಅದನ್ನು ಕೊಡಲು ಯಾರಿಗೆ ಸಾಧ್ಯ? ಜೀವದತ್ತವಾದ ಉಸಿರಿನ ಮುಂದೆ ಇಡಿ ಜಗತ್ತಿನ ಸಂಪತ್ತು ನಿರರ್ಥಕ ವಾಯಿತು. ತನ್ನ ಅರಮನೆಯನ್ನು ಮುಟ್ಟಿ ತಾಯಿ ದರ್ಶನ ಪಡೆಯುವ ಮುನ್ನವೆ ಹತನಾದ. ಇದರಿಂದ ಉಸಿರಿನ ಬೆಲೆ ಏನೆಂಬುದನ್ನು ನಾವು ಊಹಿಸಬಹುದು.

ಈ ಉಸಿರಿನಲ್ಲಿ ಅದ್ಭುತ ಶಕ್ತಿ ಅಡಗಿರುವುದನ್ನು ಭಾರತೀಯರು ಮೊದಲೇ ಗುರ್ತಿಸಿದ್ದರು. ಅಂತಹ ಶಕ್ತಿಯನ್ನು ಪಡೆದುಕೊಂಡು ಮಹಾನುಭಾವಿಗಳಾಗಿ ಬೆಳಗಿದ ಮಹಾತ್ಮರು ಭಾರತದಲ್ಲಿ ಆಗಿ ಹೋಗಿದ್ದಾರೆ. **ಆ ಮಹಿಮರಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಉದ್ಧಾನ ಶಿವಯೋಗಿಗಳು ಒಬ್ಬರು.**

ತುಮಕೂರು ಜಿಲ್ಲೆಯ ಸಿದ್ಧಗಂಗಾ ಕ್ಷೇತ್ರದಲ್ಲಿ ಮೊದಲ ಬಾರಿಗೆ ತಪಸ್ಸಾಚರಿಸಿ ಆ ಕ್ಷೇತ್ರದ ಹಿರಿಮೆಯನ್ನು ಬೆಳಗಿದವರು. ಇಂದಿನ ಚಾಮರಾಜನಗರ ಜಿಲ್ಲೆಯ ಹರದನಹಳ್ಳಿ ಗ್ರಾಮ ದಲ್ಲಿದ್ದ ಗೋಸಲ ಪೀಠದ ಪರಂಪರೆಗೆ ಸೇರಿದ ಸಿದ್ದೇಶ್ವರ ಶಿವಯೋಗಿಗಳು ಅವರ ಕರಕಮಲ ಸಂಜಾತರಾದ ಚನ್ನಬಸವೇಶ್ವರರು ತಮ್ಮ ಗುರುಗಳ ಸನ್ನಿಧಿಯಲ್ಲಿ ಇದೇ ಕ್ಷೇತ್ರದಲ್ಲಿ ಅನುಷ್ಠಾನಗೈದು ಗುಬ್ಬಿಯಲ್ಲಿ ಐಕ್ಯವಾಗಿದ್ದಾರೆ. ಈ ಕ್ಷೇತ್ರದ ಪರಂಪರೆಗೆ ಸೇರಿದ ಶಂಕರಶಿವಯೋಗಿಗಳು ಈ ಕ್ಷೇತ್ರದಲ್ಲಿ ಅನುಷ್ಠಾನ ಮಾಡಿ ನಂತರ ಕೊರಟಗೆರೆಯಲ್ಲಿ ಐಕ್ಯವಾಗಿದ್ದಾರೆ. ಹಾಗೆಯೇ ಈ ಕ್ಷೇತ್ರದ ಪ್ರಭಾವಕ್ಕೆ ಒಳಗಾದ ಸಿದ್ದೇಶ್ವರರ ಕಾಲ್ದಲ್ಲಿ, ಅನೇಕ ಮಹಾಮಹಿಮರು ಅವರು ಸಾನ್ನಿಧ್ಯದಲ್ಲಿದ್ದು ಅನುಷ್ಠಾನ ಮಾಡಿದ್ದಾರೆ. ಆ ಸಮಯದಲ್ಲಿ ಸಂತರೊಬ್ಬರಿಗೆ ದಾಹವನ್ನಡಗಿಸಲು ತಕ್ಷಣದಲ್ಲಿ ನೀರು ಸಿಗದೆ ಇದ್ದಾಗ ಸಿದ್ಧೇಶ್ವರರು ಬಂಡೆಯನ್ನು ಒತ್ತಿ ಗಂಗೋತ್ಪತ್ತಿಗೆ ಕಾರಣರಾಗಿದ್ದಾರೆ. ಆ ಗಂಗೋತ್ಪತ್ತಿಯ ಸ್ಥಾನ ಇಂದಿಗೂ ಪವಿತ್ರವಾಗಿದ್ದು ಈ ಕ್ಷೇತ್ರಕ್ಕೆ ಸಿದ್ಧಗಂಗಾ ಕ್ಷೇತ್ರವೆಂದು ಕೀರ್ತಿ ತಂದಿದೆ. ಸಿದ್ಧಗಂಗಾ ಬೆಟ್ಟದ ಮೇಲೆ ಬಂಡೆಯಲ್ಲಿರುವ ಸುಮಾರು ಮೂರು ಅಡಿ ಆಳದ ಒಂದುವಕೆ ಅಡಿ ಅಗಲದ ಕೊಳದಲ್ಲಿ ನಿರಂತರ ತೀರ್ಥ ಉದ್ಭವಿಸುತ್ತಲೆ ಇರುತ್ತದೆ. ಈ ಪವಿತ್ರ ಕ್ಷೇತ್ರದಲ್ಲಿ. ಹಳೆ ಮೈಸೂರಿನ ಸಾವಿರಾರು ಜನರು ಹಿಂದಿನಿಂದಲೂ ಇಲ್ಲಿಗೆ ಆಗಮಿಸಿ ಹರಕೆಯನ್ನು ಹೊತ್ತು ಸಂತಾನಾದಿ ಸೌಭಾಗ್ಯವನ್ನು ಪಡೆದುಕೊಂಡಿದ್ದಾರೆ. ಇಂದಿಗೂ ಸಹ ಆ ದೇವಿಯ ಉಪಾಸನೆಯನ್ನು ಮಾಡಿ ಪೂಜಾ ಕೈಂಕರ್ಯವನ್ನು ಮಾಡಿ ಪೂಜೆಯನ್ನು ಸಲ್ಲಿಸಿ ಬಹುಜನರು ಧನ್ಯರಾಗುತ್ತಿದ್ದಾರೆ. ಈ ಕ್ಷೇತ್ರವು ಅನಂತ ಕಾಲದವರೆಗೆ ಅನೇಕ ಜನ ಮಹಾನುಭಾವರಿಗೆ ಆಶ್ರಯ ನೀಡಿರುವ ತಪೋ ಭೂಮಿ.

ಎಡೆಯೂರು ಸಿದ್ಧ ಲಿಂಗೇಶ್ವರರ ನಂತರ ಶ್ರೀ ಕ್ಷೇತ್ರದ ಹಿರಿಮೆಯುನ್ನು ಮುಂದುವರೆಸಿಕೊಂಡು ಹೋದ ಮಹಾನುಭಾವರು ಯಾರೆಂಬುದರ ಬಗೆಗೆ ಸಾಕಷ್ಟು ಪುರಾವೆಗಳು ಸಿಗುತ್ತಿಲ್ಲ. ಅದರ ಬಗೆಗೆ ಅಪಾರವಾದ ಅಧ್ಯಯನ ಮತ್ತು ಸಂಶೋಧನೆಯ ಅಗತ್ಯವಿದೆ. ಆದರೆ ಕ್ರಿ.ಶ. ೧೮೫೦ರಲ್ಲಿ ಅಟವಿಸ್ವಾಮಿಗಳು ಇಲ್ಲಿ ಅನುಷ್ಠಾನ ಮಾಡಿ ಮೊದಲ ಬಾರಿಗೆ ಸಂಸ್ಕೃತ ಪಾಠಶಾಲೆ ಮತ್ತು ವಿದ್ಯಾರ್ಥಿಗಳಿಗೆ ಮತ್ತು ಭಕ್ತರಿಗೆ ದಾಸೋಹದ ವ್ಯವಸ್ಥೆ ಮಾಡಿದರು. ಶ್ರೀಮಠದ ಸಾಮಾಜಿಕ ಸೇವೆಯ ಕಾರ್ಯ ಪ್ರಾರಂಭವಾದದ್ದು ಇವರ ಕಾಲದಲ್ಲೇ. ಅವರು ತಮ್ಮ ಅಮೃತಹಸ್ತದಿಂದ ಹೊತ್ತಿಸಿದ ದಾಸೋಹದ ಒಲೆ ನಿರಂತರವಾಗಿ ಬೆಳಗುತ್ತಲೆ ಬರುತ್ತಿದೆ. ಇವರ ಕಾಲದಲ್ಲೇ ಈ ಕ್ಷೇತ್ರವು ಮಹಾನ್ ಚೇತನದ ಬೆಳಕಿನ ಸ್ಥಾಪನೆಯಾಯಿತು.

ಬೆಂಗಳೂರು, ತುಮಕೂರು ಹೆದ್ದಾರಿಯಲ್ಲಿ ಸಿಗುವ ದಾಬಸ್‌ಪೇಟೆಯ ಪಕ್ಕದಲ್ಲಿ ಕೊರಟಗೆರೆ ರಸ್ತೆಯಲ್ಲಿ ಲಕ್ಕೂರು ಎಂಬ ಸಣ್ಣ ಗ್ರಾಮ ಇಲ್ಲಿನ ಶಿವಭಕ್ತರ ಕುಟುಂಬದಲ್ಲಿ ರುದ್ರಪ್ಪ ಎಂಬ ಬಾಲಕನ ಜನನ. ಬೆಳೆದಂತೆಲ್ಲ ಸಂಸಾರದಲ್ಲಿ ನಿರಾಸಕ್ತಿ ಶುಭ ಚಿಂತನೆಯಲ್ಲಿ ನಿರಂತರ ಆಸಕ್ತ ರೈತ ಮನೆತನದವರು ಮಗನನ್ನು ನಿರುಪಯುಕ್ತನೆಂದು ಭಾವಿಸಿದ್ದರು ದನಗಾಹಿಗಳನ್ನಾಗಿ ಮಾಡಿದರು. ಅಲ್ಲೇ ಪಕ್ಕದಲ್ಲಿರುವ ನಿಜಗಲ್‌ದುರ್ಗದ ಬಳಿಗೆ ದೈನಗಾಹಿಯಾಗಿ ಹೋಗಿತ್ತಿದ್ದ ಆ ಕಾಲದಲ್ಲಿ ಈ ಪ್ರಾಂತ್ಯದಲ್ಲಿರುವ ನಿಜಗಲ್ ದುರ್ಗ, ದೇವರಾಯನ ದುರ್ಗದಲ್ಲಿ, ಸಿದ್ಧಗಂಗೆ ಕ್ಷೇತ್ರದಲ್ಲಿರುವ ಸಿದ್ಧಗಂಗಾ ರಾಮದೇವರ ಬೆಟ್ಟ ಮುಂತಾದ ಸ್ಥಳಗಳಲ್ಲಿ ಅನೇಕ ಸಾಧಕರು, ತಪಸ್ವಿಗಳು ಆಧ್ಯಾತ್ಮಿಕ ಸಾಧನೆಯನ್ನು ನಡೆಸಿದ್ದರೆಂದು ಕಂಡು ಬಂದಿದೆ. ಅಂತಹ ಯಾವುದೋ ತಂತ್ರದ ಅನುಗ್ರಹಕ್ಕೆ ಪಾತ್ರರಾದ ರುದ್ರಪ್ಪ ಅಟವಿಸ್ವಾಮಿ ಗಳವರ ಸೇವಾ ಮನೋಧರ್ಮವನ್ನು ಅರಿತು ತನ್ನ ತಂದೆ ತಾಯಿಗಳನ್ನು ತೊರೆದು ಸಿದ್ಧಗಂಗಾ ಕ್ಷೇತ್ರಕ್ಕೆ ಬರುತ್ತಾರೆ. ಅಲ್ಲಿ ಶ್ರೀಮಠದ ಕಾರ್ಯ ಬಾಹುಳ್ಯಗಳಲ್ಲಿ ತೊಡಗಿದ್ದು ದಾಸೋಹಕ್ಕೆ ಸೌದೆ ಸಂಗ್ರಹಿಸಿ ಎತ್ತಿನ ಗಾಡಿಯಲ್ಲಿ ತರುವ ಕಾಯಕದಲ್ಲಿ ನಿರತರಾಗಿರುತ್ತಾರೆ. ಆ ಸಮಯದಲ್ಲಿ ಅವರ ಹಿರಿಮೆ ಯಾರಿಗೂ ಗೊತ್ತಿರಲಿಲ್ಲ. ಅವರು ತನ್ನ ಕಾಯಕದ ಜೊತೆಯಲ್ಲಿ ಅನುಷ್ಠಾನವನ್ನು ಮುಂದುವರೆಸುತ್ತಿದ್ದರು. ರಾತ್ರಿ ವೇಳೆಯಲ್ಲಿ ರಾಮೇಶ್ವರದ ಬೆಟ್ಟಕ್ಕೆ ತೆರಳಿ ಅಲ್ಲಿದ್ದ ಸಂತರ ಸಂಪರ್ಕವನ್ನು ಪಡೆದು ತಮ್ಮ ಸಾಧನೆಯನ್ನು ಮುಂದುವರೆಸುತ್ತಿದ್ದರು. ಒಮ್ಮೆ ಹಾಸನ ಜಿಲ್ಲೆ ಸಕಲೇಶಪುರದ ಶ್ರೀಮಂತರಾದ ದೇವಪ್ಪಗೌಡರೊಬ್ಬರು ಪ್ರೇತದ ಬಾಧೆಗೆ ಸಿಕ್ಕಿ





ನರಳುತ್ತಿದ್ದರು. ಯಾರದೊ ಸಲಹೆ ಮೇಲೆ ಅದರ ಪರಿಹಾರಕ್ಕಾಗಿ ಅವರು ಸಿದ್ಧಗಂಗಾ ಕ್ಷೇತ್ರಕ್ಕೆ ಬಂದರು. ಅವರ ಬಂಧುಗಳು ದೇವಪ್ಪಗೌಡರನ್ನು ಅಟವಿಸ್ವಾಮಿಗಳ ಬಳಿಗೆ ಕರೆದು ಕೊಂಡು ಹೋಗಿ ವಿನಂತಿಸಿಕೊಂಡರು. ಅಟವಿಸ್ವಾಮಿ ಗಳವರಿಗೆ ಆದಿ ಗುರುಗಳ ಸ್ಮರಣೆ ಮಾಡಿ ಆಶೀರ್ವಾದ ಮಾಡುವುದನ್ನು ಬಿಟ್ಟು ಬೇರೆ ಸಂಗತಿಗಳು ಗೊತ್ತಿರಲಿಲ್ಲ. ಪ್ರೇತಭಾದಿತ ದೇವಪ್ಪ ಗೌಡರು ಇವರು ನನ್ನ ಗುರುಗಳಲ್ಲ ಎಂದು ಓಡುತ್ತಾ ಇರುವಾಗ ರುದ್ರಪ್ಪನವರು ಸೌದೆ ಗಾಡಿಯನ್ನು ಹೊಡೆದು ಕೊಂಡು ಬರುತ್ತಿದ್ದರು. ಅವರನ್ನು ನೋಡಿ ದೇವಪ್ಪಗೌಡರು ಅವರ ಬಳಿಗೆ ಹೋಗಿ ಇವರೇ ನಮ್ಮ ಗುರು ಎಂದು ರುದ್ರಪ್ಪನವರ ಕಾಲು ಹಿಡಿದರು. ರುದ್ರಪ್ಪನವರು ಅವರ ವಿಷಯವನ್ನು ಕೇಳಿ ಅವರ ಮೇಲೆ ಆವರಿಸಿದ್ದ ಪ್ರೇತವು ರುದ್ರಪ್ಪನವರ ಹಿಂದಿನ ಜನ್ಮದಲ್ಲಿ ಸಂಗಾತಿಯಾಗಿ ರಾಮೇಶ್ವರ ಕ್ಷೇತ್ರದಲ್ಲಿ ತತ್ವಾಚರಣೆ ಮಾಡುತ್ತಿದ್ದರೆಂದು ತನ್ನ ತಪಸ್ಸಾಚರಣೆ ಯಲ್ಲಿ ನಡೆದ ಅವಿವೇಕದಿಂದ ತನಗೆ ಜನ್ಮ ಪ್ರಾಪ್ತವಾಯಿತು ಎಂದು ಹೇಳಿಕೊಂಡರು. ರುದ್ರಪ್ಪನವರು ನಕ್ಕು ಅವರಿಗೆ ಆಶೀರ್ವದಿಸಿ ಪ್ರೇತವನ್ನು ಬಿಟ್ಟು ಹೋಗುವಂತೆ ಅಪ್ಪಣೆ ಯನ್ನು ಮಾಡಿದರು. ಅಂದು ಅಟವಿಸ್ವಾಮಿಗಳು ಇತರ ಭಕ್ತಾದಿಗಳು ರುದ್ರಪ್ಪನವರ ಹಿರಿಮೆಯನ್ನು ಅರಿತರು. ಆ ನಂತರ ಪ್ರೇತಪೀಡಿತರಾದ ಅನೇಕ ಜನರು ಕೂಡ ಈ ಕ್ಷೇತ್ರಕ್ಕೆ ಬಂದು ತಮಗೆ ಒದಗಿರುವ ಪೀಡೆಯಿಂದ ಪರಿಹಾರವನ್ನು ಪಡೆಯುತ್ತಿದ್ದರು. ಆ ಪದ್ಧತಿ ಇಂದು ಕೂಡ ಬೆಳೆಯುತ್ತಾ ಬಂದಿದೆ. ರುದ್ರಪ್ಪನವರ ಮುಂದಿನ ಜೀವನದಲ್ಲಿ ಅನೇಕ ಆಶ್ಚರ್ಯಕರವಾದ ಘಟನೆಗಳು ನಡೆದುದನ್ನು ಕಣ್ಣಾರೆ ಕಂಡವರು ತಿಳಿಸಿದ ವಿಚಾರಗಳನ್ನ ಈಗಾಗಲೇ ಲೇಖನಗಳಲ್ಲಿ ಉಲ್ಲೇಖ ಮಾಡಲಾಗಿದೆ. ರುದ್ರಪ್ಪನವರ ಮಹಿಮೆಯನ್ನು ಗಮನಿಸಿದ ಅಟವಿಸ್ವಾಮಿ ಗಳವರು ರುದ್ರಪ್ಪನವರನ್ನು ತಮ್ಮ ಉತ್ತರಾಧಿಕಾರಿಯಾಗಿ ಸ್ವೀಕರಿಸಿ ಅವರಿಗೆ ಉದ್ಧಾನ ಶಿವಯೋಗಿ ಎಂಬ ಅಭಿದಾನ ವನ್ನು ಕೊಟ್ಟು ಅವರಿಗೆ ಶ್ರೀಮಠದ ಜವಾಬ್ದಾರಿಯನ್ನು ವಹಿಸಿ ಅವರು ಚಿಕ್ಕತೊಟ್ಲುಕೆರೆ ಮಠದಲ್ಲಿ ೧೯೧೦ರಲ್ಲಿ ಐಕ್ಯವಾಗುತ್ತಾರೆ. ನಂತರ ಉದ್ಧಾನ ಶಿವಯೋಗಿಗಳು ಶ್ರೀಮಠದ ದಾಸೋಹ ಕಾರ್ಯವನ್ನು ಮತ್ತು ವಿದ್ಯಾರ್ಥಿ ಗಳಿಗೆ ವಿದ್ಯಾದಾನ ಮಾಡುವುದಲ್ಲದೆ ಸರ್ವ ಜನಾಂಗ ದವರಿಗೂ ಆಶ್ರಯ ನೀಡಿ ಶ್ರೀಮಠದ ಕಾರ್ಯದಲ್ಲಿ ಯಶಸ್ವಿಯಾಗಿ ಮುನ್ನಡೆಸಿದರು. ಉದ್ಧಾನ ಶಿವಯೋಗಿಗಳು ಜನ್ಮಾಂತರದಿಂದಲೂ ಸಿದ್ಧಿಯನ್ನು ಪಡೆದ ಮಹಾ ಪುರುಷರಾಗಿದ್ದರು. ದುರ್ದೈವದ ಸಂಗತಿ ಎಂದರೆ ಮಹಾನುಭಾವರ ಬಳಿ ಯಲ್ಲಿದ್ದವರು. ಅವರನ್ನು ಸಂಪೂರ್ಣ ವಾಗಿ ಅರ್ಥ

ಮಾಡಿಕೊಳ್ಳಲಿಲ್ಲ. ಅವರ ನಡೆ ನುಡಿಗಳ ಹಿರಿಮೆಯನ್ನು ಬರೆದಿಡಲಿಲ್ಲ. ನಮ್ಮ ಮಠಗಳ ಅನೇಕ ತಪಸ್ವಿಗಳ ಬಗೆಗೆ ಈ ಕೊರತೆಯು ಎದ್ದು ಕಾಣುತ್ತದೆ. ಒಂದು ವೇಳೆ ಮಹೇಂದ್ರನಾಥ ಗುಪ್ತ ಎಂಬ ಶಿಷ್ಯ ಶ್ರೀ ರಾಮಕೃಷ್ಣ ಪರಮಹಂಸರ ಜೀವನದ ಘಟನೆಗಳನ್ನು ದಾಖಲಿಸದೇ ಹೋಗಿದ್ದರೆ ಆ ಪರಂಪರೆ ಇಂದು ಇಷ್ಟು ಬೃಹತ್ತಾಗಿ ಬೆಳೆಯುತ್ತಿರಲಿಲ್ಲ. ಶ್ರೀಮಠದ ಅಭಿಮಾನಿಗಳು ಶತಾಯುಷಿ ಗಳಾಗುತ್ತಿರುವ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ಬಗೆಗೂ ಈ ವಿಷಯದಲ್ಲಿ ನಿರಾಸಕ್ತರಾಗಿ ರುವಂತೆ ಕಂಡು ಬಂದಿದೆ. ಒಂದು ವೇಳೆ ಉದ್ಧಾನ ಶಿವಯೋಗಿಗಳ ಸಾಧನೆ ಸಿದ್ಧಿಗಳ ಬಗೆಗೆ ದಾಖಲಿಸಿದ್ದರೆ ಈ ಕ್ಷೇತ್ರದ ಮಹಾತ್ಮೆ ಇನ್ನೂ ಶತಾಧಿಕವಾಗುತ್ತಿತ್ತು. ಅವರಲ್ಲಿ ಮೌಖಿಕವಾದ ಅದ್ಭುತ ಶಕ್ತಿ ಇತ್ತು. ಅದನ್ನು ಸಾಕಷ್ಟು ಗುರ್ತಿಸಿಲ್ಲ. ಕೆಲವನ್ನು ಇಲ್ಲಿ ಉಲ್ಲೇಖಿಸಬೇಕಾಗಿದೆ. ಮಹಾತ್ಮರ ಮಹಿಮೆಯನ್ನು ಅರ್ಥ ಮಾಡಿಕೊಳ್ಳದೆ ಪವಾಡ ಎಂಬ ಹೆಸರನ್ನು ಕರೆದು ಅದನ್ನು ಕೀಳು ದೃಷ್ಟಿಯಿಂದ ಕಾಣುವ ಮನೋಭಾವ ಇಂದಿನ ನವ ಸಮಾಜದಲ್ಲಿ ನಡೆದು ಬಂದಿದೆ. ಭಾರತದಲ್ಲಿ ಸಾಧಕರಿಗೆ ಅಮಾನುಷ್ಯ ಅದ್ವಿತೀಯ ಶಕ್ತಿಯನ್ನು ಕರುಣಿಸುವ ಅನೇಕ ವಿದ್ಯೆಗಳು ಇದ್ದವು. ಅವುಗಳಲ್ಲಿ ಕೆಲವರು ಕೆಲವು ವಿದ್ಯೆಗಳಲ್ಲಿ ಸಿದ್ಧಿಯನ್ನು ಪಡೆದವರಾಗಿದ್ದರು ಅಂತಹ ಸಿದ್ಧಿಯನು ಪಡೆದ ಅನೇಕ ಮಹಾನುಭಾವರು ಇಂದಿಗೂ ಸಹ ಭಾರತದಲ್ಲಿದ್ದಾರೆ. ಅದ್ಭುತವಾದ ವಿದ್ಯಾಸಿದ್ಧಿಯೊಂದು ಉದ್ಧಾನ ಶಿವಯೋಗಿ ಗಳವರಿಗೆ ಲಭಿಸಿತ್ತು ಅವರು ಲೌಖಿಕ ವಿದ್ಯೆಯನ್ನು ಕಲಿತವರಲ್ಲ. ಆದರೆ ಸಿದ್ಧಿ ವಿದ್ಯಾಸಂಪನ್ನ ರಾಗಿದ್ದರು ಅವರ ಬಳಿಗೆ ತಮ್ಮ ಕಷ್ಟದ ಪರಿಹಾರಕ್ಕಾಗಿ ಬಂದು ಪ್ರಾರ್ಥಿಸಿಕೊಳ್ಳುವ ಭಕ್ತರನೇಕರು ಬರುತ್ತಿದ್ದರು. ಭಕ್ತರ ಮುಖವನ್ನು ನೋಡಿ ಅವರ ಮನೋಧರ್ಮವನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿತ್ತು. ಯಾರಿಗಾದರೂ ಪರಿಹಾರವನ್ನು ಹೇಳ ಬೇಕಾದರೂ ತಮ್ಮ ಮೂಗಿನ ಮೇಲೆ ಬೆರಳನ್ನು ಆಡಿಸುತ್ತಿದ್ದರು. ಅದರಿಂದ ಭೂತ ಭವಿಷ್ಯತ್ ಮತ್ತು ವರ್ತಮಾನದ ಸಂಗತಿಗಳನ್ನು ಹೇಳಬಲ್ಲವರಾಗಿದ್ದರು. ಇಂತಹ ಅನೇಕ ಘಟನೆಗಳನ್ನು ಕಂಡವರು ಶ್ರೀಮಠದಲ್ಲಿದ್ದರು. ಆದರೆ ಅದನ್ನು ಅರ್ಥಮಾಡಿಕೊಳ್ಳದೆ ಹೋದ ಕಾರಣ ಶ್ರೀಗಳವರ ತಪೋಮಹಿಮೆಯ ವಿವರಗಳು ನಮಗೆ ದೊರೆಯ ದಂತಾಯಿತು. ಇಲ್ಲಿ ಒಂದೆರಡನ್ನು ಉಲ್ಲೇಖಿಸಲಾಗಿದೆ. ಇತ್ತೀಚಿನವರೆಗೂ ಸಿದ್ಧಗಂಗಾ ಕ್ಷೇತ್ರದ ಸಿದ್ಧಲಿಂಗೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಪೂಜಾ ಕೈಂಕರ್ಯ ವನ್ನು ನಡೆಸುತ್ತಿದ್ದು ಗಂಗಾಧರ ದೇವರನ್ನು ಬಲ್ಲವರು ಇಂದಿಗೂ ಅನೇಕವಾಗಿದ್ದಾರೆ. ಅವರಿಗೆ ಉದ್ಧಾನ ಶಿವಯೋಗಿಗಳ

ವಿಸ್ಮಯದ ದಿನಗಳ ಘಟನೆಗಳು ಗೊತ್ತಿದ್ದವು. ಅವರು ಹೇಳುತ್ತಿದ್ದನ್ನು ಉಪೇಕ್ಷೆ ಮಾಡಿದವರೆ ಹೆಚ್ಚು. ಅವರ ಸಂಬಂಧಿಕರಾದ ಶಿವಪ್ಪರೆಂಬ ವ್ಯಕ್ತಿ ಶ್ರೀಮಠದ ಆಶ್ರಯಕ್ಕೆ ತಮ್ಮ ೧೨ನೆಯ ವರ್ಷ ವಯಸಿನಲ್ಲಿ ಬಂದಿದ್ದರು. ಅವರಿಗೆ ಅಕ್ಷರ ಭಾಗ್ಯವಿರಲಿಲ್ಲ. ಆಕಸ್ಮಿಕವಾಗಿ ಅವರನ್ನು ಉದ್ದಾನ ಶಿವಯೋಗಿಗಳು ಸೇವೆಗಾಗಿ ನೇಮಿಸಲಾಗಿತ್ತು. ಅವರ ಸೇವೆಯನ್ನು ಮನಗಂಡ ಶ್ರೀಗಳವರು ಅವರಿಗೆ ವಿದ್ಯೆ ಕಲಿಯಬೇಕೆಂದು ಹೇಳಿದರು. ಆದರೆ ವಯಸ್ಸು ಮೀರಿತ್ತು. ತನಗೆ ಅದು ಸಾಧ್ಯವಿಲ್ಲವೆಂದು ಹೇಳಿದರು. ಅವರನ್ನು ಅಮಾವಾಸ್ಯೆ ರಾತ್ರಿಯಲ್ಲಿ ತಮ್ಮೊಡನೆ ರಾಮದೇವರ ಕ್ಷೇತ್ರಕ್ಕೆ ಬಂದರೆ ವಿದ್ಯಾವಂತನಾಗುತ್ತೀಯವೆಂದರು. ಆದರೆ ಆ ಯೋಗ ಅವರಿಗೆ ಲಭ್ಯವಾಗಲಿಲ್ಲ. ಮರುದಿನ ಮೂಗಿನ ಮೇಲೆ ಶ್ರೀಗಳು ಬೆಳ್ಳನ್ನು ಇಟ್ಟು ನಿನಗೆ ವಿದ್ಯೆ ಬರುತ್ತದೆ ಎಂದು ಹೇಳಿದರು. ಶ್ರೀಗಳವರ ಸೇವೆ ಮಾಡುತ್ತಲೆ ಬಿಡುವಿನ ವೇಳೆಯಲ್ಲಿ ಅವರಿವರಿಂದ ಕನ್ನಡ ಮತ್ತು ಸಂಸ್ಕೃತವನ್ನು ಕಲಿತುಕೊಂಡರು. ಹಾಗೆಯೇ ಮುಂದುವರೆದು ಅಲಂಕಾರ ಶಾಸ್ತ್ರದಲ್ಲಿ ವಿದ್ವತ್ ಪದವಿಯನ್ನು ಪಡೆದರು. ನಂತರ ಇಂಗ್ಲೀಷ್ ಕಲಿತು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪಾಸಾದರು. ನಂತರ ಅವರು ಶ್ರೀ ಮಹದೇಶ್ವರ ದೇವಸ್ಥಾನದಲ್ಲಿ ಸ್ವಾಮಿಯ ಪೂಜಾ ಕೈಂಕರ್ಯವನ್ನು ಮಾಡುತ್ತಾ ಬರುತ್ತಿದ್ದಾರೆ. ಶ್ರೀ ಶಿವಯೋಗಿಗಳ ಉತ್ತರಾಧಿಕಾರಿಗಳಾಗಿ ಮರುಳಾರಾಧ್ಯ ಎಂಬುವರು ದೀಕ್ಷೆಯನ್ನು ಪಡೆದಿದ್ದರು. ಅವರ ಸಕಾಲ ಮರಣಕ್ಕೆ ತುತ್ತಾದರಿ ಆ ಸಮಯದಲ್ಲಿ ಇಂದಿನ ಶ್ರೀಗಳವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಓದುತ್ತಿದ್ದರು. ಅವರ ವಿದ್ಯಾಭ್ಯಾಸದ ಜೀವನದಲ್ಲಿ ವಿಚಾರವಾದಿಗಳಾಗಿದ್ದವರು ಸನ್ಯಾಸಿಯಾಗುವ ಕನಸು ಕಂಡವರಲ್ಲ ಮರುಳಾರಾಧ್ಯರ ಅಂತ್ಯ ಸಂಸ್ಕಾರಕ್ಕಾಗಿ ಶ್ರೀಮಠಕ್ಕೆ ಬಂದಿದ್ದರು. ಅಂದು ಜಾತ್ರೆ ನಡೆಯುವ ಸಮಯ ಶ್ರೀ ಉದ್ದಾನ ಶಿವಯೋಗಿಗಳು ಕ್ಷಣ ಕಾಲ ನಿರೀಕ್ಷಿಸಿ ಇಂದಿನ ಶ್ರೀಗಳವರನ್ನು ತನ್ನ ಮುಂದಿನ ಉತ್ತರಾಧಿಕಾರಿಗಳೆಂದು ಘೋಷಿಸಿದರು. ಇಂದಿನ ಶ್ರೀಗಳವರ ಕುಟುಂಬದಲ್ಲಿ ಅವರೊಬ್ಬರೆ ವಿದ್ಯಾವಂತರಾಗಿದ್ದರು. ಅವರ ಮನೆಯವರ ನಿರೀಕ್ಷೆ ಬೇರೆ ಇತ್ತು. ಶಿವಯೋಗಿಗಳ ವಾಣಿ ಮಾತ್ರದಿಂದಲೇ ಶ್ರೀಗಳವರು (ಶಿವಣ್ಣನವರು) ಅವರ ಮನೆಯವರನ್ನು ಕೇಳದೆ ಅವರ ಆಜ್ಞೆಗೆ ಬದ್ದರಾದರು. ಉತ್ತರಾಧಿಕಾರಿಗಳಾದ ಮೇಲೆ ಶ್ರೀಮಠದ ಕಾರ್ಯ ನಿರ್ವಹಣೆಯ ಹೊಣೆಗಾರಿಕೆಯನ್ನು ಶ್ರೀಗಳವರಿಗೆ ವಹಿಸಿದರು. ಅನೇಕ ಕಷ್ಟದ ಆತಂಕಗಳು ಒದಗಿ ಬರುತ್ತಿದ್ದವು. ಆಗ ಶಿವಯೋಗಿಗಳು ಕೊಡುತ್ತಿದ್ದ ಸೂಚನೆ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದವು. ಅವರ ಸಂಕಲ್ಪ ಮಾತ್ರದಿಂದ ಶ್ರೀಮಠದ ಕೀರ್ತಿ ವಿಶ್ವವ್ಯಾಪಿಯಾಗಿದೆ.

ಶಿವಯೋಗಿಗಳಿಗೆ ಇಂತಹ ಅದ್ಭುತ ಶಕ್ತಿ ಹೇಗೆ ಬಂದಿತ್ತು ಎಂಬುದು ಗಮನಾರ್ಹ ಸಂಗತಿ. ಈ ಹಿಂದೆ ಉಸಿರಿನ ಮಹತ್ವವನ್ನು ಪ್ರಸ್ತಾಪಿಸಲಾಗಿದೆ. ಮನುಷ್ಯರು ಜೀವಂತವಾಗಿರಲು ಉಸಿರಾಟವು ಅನಿವಾರ್ಯ ಆದರೆ ಅದರ ವಿಧಾನವನ್ನು ಬಲ್ಲವರು ವಿರಳ, ಉಸಿರಾಡುವಾಗ ಸಾಮಾನ್ಯವಾಗಿ ಎಡ ಭಾಗದಿಂದ ಉಸಿರನ್ನು ತೆಗೆದು ಕೊಂಡು ಬಲ ಮೂಗಿನಲ್ಲಿ ಬಿಡುವುದು ಎಲ್ಲರ ಅನುಭವ ಆದರೆ ಇಡೀ ದಿನವೆಲ್ಲಾ ಒಂದೆ ಕಡೆ ಉಸಿರನ್ನು ತೆಗೆದುಕೊಂಡು ಒಂದೇ ಕಡೆಯಿಂದ ಬಿಡುವುದಿಲ್ಲ. ಇದರಲ್ಲಿ ಆಗಾಗ್ಗೆ ಬದಲಾವಣೆಯಾಗುತ್ತದೆ. ಇದನ್ನು ನಾವು ಅಷ್ಟಾಗಿ ಗಮನಿಸುವುದಿಲ್ಲ ಅದರಲ್ಲಿ ಅದ್ಭುತ ಸಂಗತಿಯೊಂದಿಗೆ ನಾವು ಯಾವ ಸಮಯದಲ್ಲಿ ಮೂಗಿನ ಯಾವ ಭಾಗದಲ್ಲಿ ಉಸಿರನ್ನು ತೆಗೆದುಕೊಳ್ಳುತ್ತೇವೆ ಯಾವ ಭಾಗದಿಂದ ಬಿಡುತ್ತೇವೆ ಎಂಬುದು ನಮ್ಮ ಕಾರ್ಯದಲ್ಲಿ ಜಯಾಪಜಯವನ್ನು ನಿರ್ಧರಿಸುತ್ತದೆ. ಉಸಿರಿನ ನಿಯಂತ್ರಣ ವಿಧಾನದಲ್ಲಿ ಪ್ರಾಣಾಯಾಮದ ವಿಧಾನವೊಂದಿದೆ ಅದರಲ್ಲಿ ಅನೇಕ ವಿಧಾನವಿದೆ ಇದು ದೇಹ ಶುದ್ಧಿಗೆ ಮತ್ತು ಆರೋಗ್ಯ ರಕ್ಷಣೆ ಮಾತ್ರ ಉಪಯುಕ್ತ. ಆದರೆ ಉಸಿರಾಡುವ ವಿಧಾನದಿಂದ ಸಿದ್ಧಿಯನ್ನು ಪಡೆದರೆ ಭೂತ ಭವಿಷ್ಯವನ್ನು ಅರಿಯುವ ಅನುಭವ ಸಿದ್ಧಿಯಾಗುತ್ತದೆ. ಇಂತಹ ಸಿದ್ಧಿಯನ್ನು ಶ್ರೀ ಉದ್ದಾನಶಿವಯೋಗಿಗಳು ಪಡೆದಿದ್ದರು ಇದೊಂದು ಪ್ರಾಚೀನ ವಿದ್ಯೆ ಇದನ್ನು ಜ್ಞಾನಿಗಳು ಸ್ವರಯೋಗ ಶಿವಸ್ವರಯೋಗ ಎಂದು ಕರೆಯುತ್ತಾರೆ. ಇದನ್ನು ಶಿವನೇ ಪಾರ್ವತಿಗೆ ಬೋಧಿಸಿದ ಮಹಾವಿದ್ಯೆಯೆಂದು ಪ್ರಚಲಿತವಾಗಿದೆ. ಈ ಗ್ರಂಥದಲ್ಲಿ ೩೫೫ ಶ್ಲೋಕಗಳಿವೆ. ಇದರಲ್ಲಿ ನಮಗೆ ಅಗತ್ಯವಾದ ಸಿದ್ಧಿಯನ್ನು ಪಡೆಯುವ ವಿಧಿ ವಿಧಾನಗಳ ಸಾಧನೆ ಸಿದ್ಧಿಗಳ ವಿವರಣೆ ಇದೆ. ಈ ವಿದ್ಯೆಯ ಸಿದ್ಧಿಯು ಶಿವಯೋಗಿಗಳಿಗೆ ಲಭ್ಯವಾಗಿತ್ತೆಂದು. ಅವರ ಜೀವನದ ಘಟನೆಗಳಿಂದ ನಿರ್ಧರಿಸಬಹುದು ಆದುದರಿಂದ ಅವರು ಸ್ವರಯೋಗಸಿದ್ಧ ಉದ್ದಾನ ಶಿವಯೋಗಿಗಳಾಗಿದ್ದರು. ಆ ಸಿದ್ಧಿಯ ಫಲವನ್ನು ಶ್ರೀ ಕ್ಷೇತ್ರದಲ್ಲಿ ಸಾಧನೆ ಮಾಡಿದರೆ ಇಂದಿಗೂ ಪಡೆಯುವ ಸಾಧ್ಯವಿದೆ. ಭೌತಿಕವಾಗಿ ಅವರು ನಮ್ಮೊಂದಿಗೆ ಇರದಿದ್ದರೂ ಅವರ ಸಿದ್ಧಿಯ ಅನುಗ್ರಹ ಶ್ರೀಮಠದ ಮತ್ತು ಭಕ್ತರ ಸಂಕಟಗಳ ಪರಿಹಾರಕ್ಕೆ ಕಾರಣವಾಗಿದೆ ಅವರ ಅನುಗ್ರಹ ನಿರಂತರವಾಗಿ ದೊರೆಯಲೆಂದು ಪ್ರಾರ್ಥಿಸುವೆ.

*





# ಸಿದ್ಧರಾಮನ ವಚನಗಳಲ್ಲಿ ವೀರಶೈವ ತತ್ತ್ವಜ್ಞಾನ ಮತ್ತು ಅನುಭಾವ

ಇಂಗ್ಲೀಷ್ ಮೂಲ – ಪ್ರೊ. ದಾನೇಷ್ ಚಕ್ಕಿ, ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ, ವಿನಿಪೆಗ್ ವಿಶ್ವವಿದ್ಯಾಲಯ, ಕೆನಡ.
ಕನ್ನಡ ಅನುವಾದ : ಟಿ.ಎಸ್. ರಾಮಚಂದ್ರರಾವ್, ನಿವೃತ್ತ ಪ್ರಾಂಶುಪಾಲರು, ತುಮಕೂರು.

**ಪೀಠಿಕೆ :**

ಮಾನವನ ಬೆಳವಣಿಗೆಯ ಬೇರು ಆಧ್ಯಾತ್ಮಿಕತೆಯಲ್ಲಿ ಅಡಗಿದೆ. ಅದೊಂದು ದೈನಂದಿನ ಘಟನೆಗಳು, ನಂಬಿಕೆಗಳು, ಸ್ವಾನುಭಾವದ ಹಾಗೂ ಜೀವನದ ಬಗ್ಗೆ ಹೊಂದಿರುವ ಅರ್ಥ ಇವುಗಳ ಸಮೀಚೀನ ದೃಷ್ಟಿ ಕೋನ. ವೀರಶೈವ ತತ್ತ್ವಜ್ಞಾನ ಎಂದರೆ ತೇಜಃ ಪುಂಜವಾದ ಬಣ್ಣಬಣ್ಣದ ಬೆಳಕನ್ನು ಸುತ್ತಲೂ ಹರಡುವ ಒಂದು ಚಿತ್ತಾರ. ಅದರ ಭದ್ರಬುನಾದಿ ಎಂದರೆ ಏಕದೇವಾತ್ಮ ವಾದದ ಆದರ್ಶದೊಡನೆ ಸ್ವಾತಂತ್ರ್ಯ ಮತ್ತು ಸಮಾನತೆ, ಬಲವಾದ ಕಾಯಕ ತತ್ವವೆಂಬ ನೀತಿ, ಸಾಮಾಜಿಕ ಸೇವೆ ಮತ್ತು ಅದರ ಏಳುಬೀಳುಗಳಲ್ಲಿ ಭಾಗಿಯಾಗುವುದು, ನ್ಯಾಯಬದ್ಧವಾದ ನಡತೆಯ ದಂಡ ಸಂಹಿತೆ ಮತ್ತು ಅಂತಿಮವಾಗಿ ದೈವದೊಡನೆ ಮೋಕ್ಷಸಾಧನೆ ಹೊಂದುವ ಆಧ್ಯಾತ್ಮಿಕ ಗುರಿ."



ಹನ್ನೆರಡನೆಯ ಶತಮಾನದ ಅಸಂಖ್ಯಾತ ತತ್ತ್ವಜ್ಞಾನಿ–ವಚನಕಾರರಲ್ಲಿ ಸಿದ್ಧರಾಮ ಒಬ್ಬ ಉನ್ನತ ಮಟ್ಟದ ಆಧ್ಯಾತ್ಮ ಯೋಗಿ. ಅವರ ಜೀವನ ಚರಿತ್ರಕಾರನಾದ ಕವಿ ರಾಘವಾಂಕನ ಪ್ರಕಾರ, ಅವರೊಬ್ಬ ದೀಕ್ಷಾಬದ್ಧ ವ್ಯಕ್ತಿ, ಮತ್ತು ನಿಗೂಢ ಶಕ್ತಿಯನ್ನು ಪಡೆದಿದ್ದ ಅವರಿಗೆ 'ತೃತೀಯ ದೃಷ್ಟಿ' ಯೊಂದಿತ್ತು. ದೇವಾಲಯಗಳ ನಿರ್ಮಾಣ, ಕೆರೆಗಳ ನಿರ್ಮಾಣ, ತಂಗುದಾಣಗಳು ಮತ್ತು ನೀರಿನ ಚಿಲುಮೆಗಳು ಮೊದಲಾದ ಸಮಾಜೋಪಯೋಗಿ ಸೇವಾಕಾರ್ಯಗಳಲ್ಲಿ ತೊಡಗಿಸಿ ಕೊಂಡು ಭಾರತದಲ್ಲಿ ಮಹಾರಾಷ್ಟ್ರದ ಶೋಲಾಪುರ (ಸೊನ್ನಲಿಗೆ) ಸುತ್ತಮುತ್ತಲ ಪ್ರದೇಶಗಳಲ್ಲಿ ಸಿದ್ಧರಾಮ ಕಾಯಕ ಮಾಡುತ್ತಿದ್ದರು. ಅವರ ಅನುಯಾಯಿಗಳಲ್ಲಿ ಅವರ ಬಗ್ಗೆ ತುಂಬಾ ಗೌರವವಿತ್ತು.

ಅವರಲ್ಲಿ ಒಬ್ಬ ಯೋಗಿಗೆ ಇರಬೇಕಾದ ಅದ್ಭುತ ಯೋಗಶಕ್ತಿ ಇದ್ದರೂ, ಸಿದ್ಧರಾಮ ಇನ್ನೂ ಶಿವಯೋಗಿ ಅಥವಾ ವೀರಶೈವ ರಾಗಿರಲಿಲ್ಲ. ಕಲ್ಯಾಣದ ದಾರಿಯಲ್ಲಿ ಹೋಗುವಾಗ ಪ್ರಭು (ಪ್ರಭುದೇವರು) ಸಿದ್ಧರಾಮರನ್ನು ಕಂಡು ಸಮಾಜಸೇವೆ ಮತ್ತು ನಿಗೂಢಶಕ್ತಿಗಳನ್ನು ಪಡೆಯುವುದರಿಂದ ಮಾತ್ರವೇ ಆಧ್ಯಾತ್ಮಿಕ ಸಿದ್ಧಿಯಾಗಲೀ ಅಥವಾ ಅಂತಿಮ ಗುರಿಯಾದ ಮೋಕ್ಷವಾಗಲೀ ಪಡೆಯುವುದಕ್ಕೆ ಸಾಧ್ಯವಿಲ್ಲವೆಂದು ಮನವರಿಕೆ ಮಾಡಿದರು. ಮೋಕ್ಷಸಿದ್ಧಿಗೆ ಶಿವಜ್ಞಾನವೂ ಸಹ ಒಂದು ಮೂಲಭೂತ ಅವಶ್ಯಕತೆಯೆಂದು ತಿಳಿಸಿದರು. ಈ ಬಗ್ಗೆ ದೀರ್ಘವಾದ ಹಾಗೂ ಬಲವಾದ ಚರ್ಚೆಯ ನಂತರ, ವೀರಶೈವ ಶರಣರೊಡನೆ ಸೇರಿಕೊಂಡು ಅವರಿಂದ ವೀರಶೈವ ತತ್ತ್ವಾನುಭವ ಹಾಗೂ ಧರ್ಮಜ್ಞಾನವನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆಯನ್ನು ಅರ್ಥಮಾಡಿಕೊಂಡರು.

ಸಿದ್ಧರಾಮರು ಪ್ರಭುವನ್ನು ಅನುಸರಿಸಿ, ಕಲ್ಯಾಣಕ್ಕೆ ಹೊರಟರು. ಅಲ್ಲಿ ಸೇರಿದ್ದ ವೀರಶೈವ ಶರಣರ ಗುಂಪು ಹಾಗೂ ಅವರ ಸಾಮಾಜಿಕ ಮತ್ತು ಆಧ್ಯಾತ್ಮಿಕ ಜೀವನ ಕ್ರಮಗಳಿಂದ ತುಂಬಾ ಪ್ರಭಾವಿತರಾದರು. ಸಿದ್ಧರಾಮರ ಎದುರಿನಲ್ಲಿಯೇ ಕಲ್ಯಾಣದಲ್ಲಿನ ಆ ಅನುಭವ ಮಂಟಪದಲ್ಲಿ ಅವರನ್ನು ತಮ್ಮಲ್ಲಿ ಒಬ್ಬ ಸದಸ್ಯನನ್ನಾಗಿ ಸ್ವೀಕರಿಸುವ ಬಗ್ಗೆ ಅವರ ಅರ್ಹತೆಯ ವಿಷಯ ವಾಗಿ ಜಿಜ್ಞಾಸೆ ತಲೆದೋರಿ ಬಲವಾದ ಯುಕ್ತಿಗಳಿಂದ ಕೂಡಿದ ಚರ್ಚೆಯು ನಡೆಯಿತು. ಸಿದ್ಧರಾಮರ ಕೋರಿಕೆಯನ್ನು ಮನ್ನಿಸಿ, ಅಂತಿಮವಾಗಿ ಚೆನ್ನಬಸವಣ್ಣನವರು ಇಷ್ಟಲಿಂಗ ತತ್ತ್ವ ಮತ್ತು ವೀರಶೈವ ಜೀವನಕ್ರಮವನ್ನು ಉಪದೇಶಿಸಿದರು. ಅದರ ಪರಿಣಾಮವೆಂದರೆ, ಸಿದ್ಧರಾಮರಲ್ಲಿ ಗಾಢವಾದ ಆಧ್ಯಾತ್ಮಿಕ ಪರಿವರ್ತನೆಯುಂಟಾಯಿತು. ಅವರ ವಚನಗಳು ಕೇವಲ ಭಕ್ತಿಯಿಂದ ಕೂಡಿದವುಗಳಷ್ಟೆ ಅಲ್ಲ, ಅವು ಸಿದ್ಧರಾಮರಿಗೆ ವೀರಶೈವ ತತ್ತ್ವಜ್ಞಾನ, ಆಧ್ಯಾತ್ಮಯೋಗ, ಮತ್ತು ಸಂಸ್ಕೃತಿಗಳಲ್ಲಿ ಇದ್ದ ಆಳವಾದ ಜ್ಞಾನವನ್ನು ಪ್ರತಿಬಿಂಬಿಸುತ್ತವೆ.

**ಶಿವನ ಕಲ್ಪನೆ :**

ಸಿದ್ಧರಾಮರು ಶಿವನನ್ನು ಬಗೆಬಗೆಯಲ್ಲಿ ಅದ್ಭುತವಾಗಿ ವರ್ಣಿಸಿದ್ದಾರೆ. ಜಗದೊಡೆಯನಾದ ಶಿವನು ಆಕಾರ ಹಾಗೂ ನಿರಾಕಾರ ಸ್ವರೂಪನು. ಶಿವ ಅತ್ಯಾನಂದವನ್ನು ಕೊಡು

ವವನು ಮತ್ತು ನಿಷ್ಕಳಂಕಸ್ವರೂಪಿ ಹಾಗೂ ಕಾಲಾತೀತ ಮತ್ತು ಬ್ರಹ್ಮಾಂಡವ್ಯಾಪಿಯಾದವನು. ಅವನು ಭಾವನೆ ಮತ್ತು ಮಾತುಗಳನ್ನು ಮೀರಿದವನು. ಅಂತಹ ಶಿವನನ್ನು ಕುರಿತು ಅವರು ಹೀಗೆ ಹೇಳುತ್ತಾರೆ. 'ಪ್ರಭು ನಿನ್ನನ್ನು ನೋಡಿದೊಡನೆ ನನ್ನ ಕಣ್ಣುಗಳಲ್ಲಿ ಜ್ಯೋತಿಪ್ರಕಾಶ ತುಂಬುತ್ತದೆ ಮತ್ತು ದೃಷ್ಟಿ ಮರಗಟ್ಟಿದಂತಾಗುತ್ತದೆ! ಕೋಟಿ ಸೂರ್ಯರ ಪ್ರಕಾಶಕ್ಕೂ ಮಿಗಿಲಾಗಿ ನಿನ್ನ ಕೊನೆಯಿಲ್ಲದ ಅದ್ಭುತ ಪ್ರಭೆ ಬೆಳಗುತ್ತದೆ!' ಅದೂ ಅಲ್ಲದೆ ಅಂತಹ ಸಾಕಾರದ ಮೇಲೆ ಕೇಂದ್ರೀಕೃತವಾಗುವ ದೃಷ್ಟಿಯನ್ನು ಸಂಪೂರ್ಣವಾಗಿ ಅದರಲ್ಲಿಯೇ ವಿಲೀನಗೊಳಿಸುವುದಕ್ಕೆ ಬದಲಾಗಿ, ಅದು ನಿರಾಕಾರ ಸ್ವರೂಪದಲ್ಲಿ ಲೀನವಾಗಬೇಕೆಂದು ಸಿದ್ಧರಾಮರು ಸೂಚಿಸುತ್ತಾರೆ.

ಶಿವನ ಬಗ್ಗೆ ಹೇಳುತ್ತ ಸಿದ್ಧರಾಮರು ಯಾರೂ ನೋಡಲು ಆಗದಂತಹ ಹಾಗೂ ಮುಟ್ಟಲು ಆಗದಂತಹ ನಿರಾಕಾರ ಸ್ವರೂಪಿ ಅವನೆಂದು ನಮಗೆ ತಿಳಿಸುತ್ತಾರೆ. ಅವನಿಗೆ ನೆರಳೆಂಬುದೂ ಇಲ್ಲ. ಹೆಜ್ಜೆಗಳ ಗುರುತೂ ಬೀಳುವುದಿಲ್ಲ. ಅವನು ಕಣ್ಣಿಗೆ ಕಾಣಿಸಿದರೂ ಅವನ ಆಳವನ್ನು ಕಂಡು ಹಿಡಿಯಲು ಆಗುವುದಿಲ್ಲ ಮತ್ತು ಅವನನ್ನು ಅರ್ಥಮಾಡಿಕೊಳ್ಳುವುದೂ ಕಷ್ಟ. 'ಓ ಪ್ರಭು, ನೀನು ಬೀಜ ಮತ್ತು ವೃಕ್ಷದಂತೆ ಇರುವವನು, ನಿರಾಕಾರ ಸ್ವರೂಪ ಸಾಕಾರಗೊಳ್ಳುತ್ತದೆ. ಅವನಿರುವನೆಂದಾಗ, ಅವನಲ್ಲಿರುವುದಿಲ್ಲ. ಭಗವಂತ ನೀನು ಶೂನ್ಯನೆಂದೆನಿಸಿರುವೆ!'

ವೀರಶೈವರ ಏಕೇಶ್ವರ ತತ್ತ್ವಸಿದ್ಧಾಂತವನ್ನು ಸಿದ್ಧರಾಮರು ಬಲವಾಗಿ ಪ್ರತಿಪಾದಿಸುತ್ತಾರೆ. ವಾರದ ಏಳು ದಿನಗಳಿಗೂ ನಾವು ಸಪ್ತ ಹೆಸರುಗಳನ್ನು ಕೊಟ್ಟಿದ್ದರೂ ಹೇಗೆ ಆ ಏಳು ದಿನಗಳಲ್ಲಿಯೂ ವ್ಯತ್ಯಾಸಗಳಿಲ್ಲವೊ ಹಾಗೆಯೇ ದೇವರು ಸಹ ಒಬ್ಬನೇ. ಅವನು ಅನೇಕರಲ್ಲಿ ಒಬ್ಬನು ಮತ್ತು ಒಬ್ಬನಲ್ಲಿ ಅನೇಕನು. ಆಕಾರ ಮತ್ತು ನಿರಾಕಾರ ಎರಡರಲ್ಲಿಯೂ ಶಿವನು ಒಬ್ಬನೆ. ಒಬ್ಬ ಭಕ್ತನಾಗಿ ಸಿದ್ಧರಾಮರು ಪರಶಿವನ ಅನುಗ್ರಹವನ್ನು ಅತ್ಯಂತ ಕೃತಜ್ಞತಾಭಾವದಿಂದ ಸ್ವೀಕರಿಸುತ್ತಾರೆ. 'ದೇವರೆ, ನಿನ್ನ ಅನುಗ್ರಹ ಎನ್ನುವುದು ಎಷ್ಟು ಉದಾರವಾದುದು!' ಸಿದ್ಧರಾಮರು ಪ್ರತಿಪಾದಿಸುವಂತೆ, ಕರಣ, ಚಿತ್ತ, ಹಾಗೂ ಕ್ರಿಯೆ ಇವುಗಳು ಶಿವನ ಪ್ರಭಾವದಿಂದ ಜರುಗುತ್ತವೆ ಎಂದಾಗ, ವೀರಶೈವ ಸಿದ್ಧಾಂತವಾದ ಇಡೀ ಜಗತ್ತನ್ನು ನಿಯಂತ್ರಿಸಬಲ್ಲ ಅಗಾಧ ಶಕ್ತಿಸ್ವರೂಪನಾದ ಶಿವ ಎಂಬ ಮಾತು ಸ್ಪಷ್ಟಗೊಳ್ಳುತ್ತದೆ. 'ಹೇಗೆ ಬಳೆಗಳು ಮತ್ತು ಕಂಠೀಹಾರಗಳು ಒಂದೇ ಬಗೆಯ ಚಿನ್ನದಲ್ಲಿ ಮಾಡಲ್ಪಡುತ್ತವೆಯೋ, ಹೇಗೆ ಒಂದೇ ಮಣ್ಣಿನಿಂದ ಅನೇಕ ಮಡಕೆಗಳು ಮಾಡಲ್ಪಡುತ್ತವೆಯೋ, ಅದೇ ರೀತಿ ಸರ್ವೋತ್ತಮವಾದ ಲಿಂಗ(ಶಿವ)ದಿಂದ ಇಡೀ ಜಗತ್ತು ಸೃಷ್ಟಿಸಲ್ಪಟ್ಟಿದೆ' ಆದಿಯಲ್ಲಿ, ಮಧ್ಯದಲ್ಲಿ ಮತ್ತು ಅಂತ್ಯದಲ್ಲಿ ಶೂನ್ಯವನ್ನು ಬಿಟ್ಟು ಬೇರೇನೂ ಇಲ್ಲ. (ಅಂದರೆ ಶಿವ, ಲಿಂಗ) ವ್ಯಕ್ತಿಗತ ಆತ್ಮ ಹಾಗೂ ಶಿವನ ನಡುವೆ ವ್ಯತ್ಯಾಸವಿಲ್ಲ. ಜಾಗ್ರತ ಮನಸಿನ ಅಂತರಾಳದಲ್ಲಿ ಜ್ಞಾನಜ್ಯೋತಿಯ ರೂಪದಲ್ಲಿ ನೆಲಸಿದೆ ಪರಮ ಶ್ರೇಷ್ಠವಾದುದು. ಅದೇ ನಿರಂತರವೆನ್ನಿಸುವ ಶಿವ ಅಂದರೆ ಇಷ್ಟಲಿಂಗ. 'ನನ್ನ ಕಣ್ಣಿಂದ ಅವನನ್ನು ಕಾಣುವೆ ಆದರೆ ಪುನಃ ಅವನನ್ನು ನೋಡುವುದಿಲ್ಲ!'

## ಗುರು :

ಬಹುತೇಕ ವೀರಶೈವ ತತ್ತ್ವಜ್ಞಾನಿಗಳು, ಗುರು, ಲಿಂಗ ಮತ್ತು ಜಂಗಮ ಎನ್ನುವ ವೀರಶೈವ ಪರಶಿವನ ತ್ರಿಮೂರ್ತಿತ್ವದ ಬಗ್ಗೆ ಗಮನವನ್ನು ಕೇಂದ್ರೀಕರಿಸುತ್ತಾರೆ. ಸಿದ್ಧರಾಮರು ವೀರಶೈವ ಗುಂಪಿನೊಳಗೆ ಹೊಸದಾಗಿ ಪ್ರವೇಶ ಪಡೆದವರಾದರೂ, ಭಕ್ತಜನರ ಅನುಕೂಲಕ್ಕಾಗಿ ಈ ತ್ರಿಕೂಟದ ಕೇಂದ್ರ ಬಿಂದುವಾಗಿ ಶಿವನನ್ನು ಸ್ಥಿರವಾಗಿ ಬಿಂಬಿಸುವುದರಲ್ಲಿ ಹಿಂದೆ ಬೀಳಲಿಲ್ಲ. ಶಿವ ಎಂದರೆ 'ಗುರು' ಮೃದುತ್ವಕ್ಕೆ, 'ಲಿಂಗ' ಜ್ಞಾನಕ್ಕೆ, ಮತ್ತು 'ಜಂಗಮ' ಸ್ವರೂಪಕ್ಕೆ, ಇವು ಮೂರೂ 'ಸತ್ ಚಿತ್' ಆನಂದರೂಪದಲ್ಲಿ ಕ್ರಮವಾಗಿ ನಮ್ಮ ಶರೀರಕ್ಕೆ ಅನ್ವಯಿಸುವಂತೆ ದೇಹ, ಮನಸ್ಸು ಮತ್ತು ಆಧ್ಯಾತ್ಮಿಕ ಸಂಪತ್ತುಗಳಾಗಿವೆ. ಗುರು, ಉಪದೇಶಿಸುವುದರ ಮೂಲಕ ಲಿಂಗ ಜ್ಞಾನವನ್ನು ಕರುಣಿಸುತ್ತಾನೆ. ನಮ್ಮ ಬುದ್ಧಿ, ಪ್ರಜ್ಞೆ ಮತ್ತು ಜ್ಞಾನವನ್ನು ಉದಾತ್ತಗೊಳಿಸುವುದರಲ್ಲಿ ಲಿಂಗ ಒಂದು ಸಾಧನವಾಗಿರುತ್ತದೆ. ನಮ್ಮ ಪ್ರಾಪಂಚಿಕ ದೋಷಗಳನ್ನು ಜಂಗಮವು ನಿವಾರಿಸುತ್ತದೆ. ಆದರೂ ಇವು ಮೂರೂ ಒಂದೇ ಆಗಿದ್ದು ಪ್ರಮುಖವಾಗಿ ಭಗವಂತನಾದ ಶಿವನಲ್ಲಿ ಸೃಷ್ಟೀಕರಣಗೊಂಡಿವೆ.

'ಗುರು'ವಿನ ಮೂಲಕ ಕಾಯವು ಪರಿಶುದ್ಧಗೊಳ್ಳುತ್ತದೆ. ಮನಸ್ಸು 'ಲಿಂಗ'ದ ಮೂಲಕ ಮತ್ತು ಐಸಿರಿಯು 'ಜಂಗಮ'ದ ಮೂಲಕ ಶುದ್ಧಗೊಳ್ಳುತ್ತವೆ. ಕಾಯ, ವಾಕ್, ಮನಸ್ಸುಗಳಿಗೆ ಸಂಬಂಧಪಟ್ಟಿರುವ ದೋಷಗಳು ನಿವಾರಣೆಯಾದ ನಂತರ ವ್ಯಕ್ತಿಯು ನಿಜವಾದ ಭಕ್ತನೆನಿಸಿಕೊಳ್ಳುತ್ತಾನೆ. ಸಿದ್ಧರಾಮರ ಅನುಸಾರ ಶಿವಾನುಭವದಲ್ಲಿ ಮುಳುಗಿರುವ 'ಗುರು'ವೇ ಪಾರಂಗತನಾದ 'ವೀರಶೈವ'. ಅವನು ಪರಮೋಚ್ಚ ಆನಂದದ ಮೂರ್ತರೂಪ, ಮತ್ತು ಪುನರ್ಜನ್ಮದ ಸಂಕೋಲೆಯಿಂದ ಮುಕ್ತನಾದವನು. ಸಿದ್ಧರಾಮರು ತಮ್ಮನ್ನು 'ಇಷ್ಟಲಿಂಗ' ತತ್ತ್ವಜ್ಞಾನಕ್ಕೆ ಪ್ರವೇಶ ಮಾಡಿಸಿದ ತಮ್ಮ 'ಗುರು' ಚೆನ್ನಬಸವಣ್ಣನವರಿಗೆ ಅಧಿಕೃತ ವಾಗಿ ಭಕ್ತಿಯನ್ನು ಅರ್ಪಿಸುತ್ತಾರೆ. 'ಗುರು'ವಿನ ಕೃಪೆ ಯಾಗದ ಹೊರತು ಯಾರಿಗೂ ಶಿವನ ಸಾಕ್ಷಾತ್ಕಾರ ಸಾಧ್ಯವಾಗದೆಂಬ ನಂಬಿಕೆಯನ್ನು ಸಿದ್ಧರಾಮರು ಒತ್ತಿ ಹೇಳುತ್ತಾರೆ.





ಬ್ರಹ್ಮಾಂಡದಲ್ಲಿ ಭೌತಿಕ ಪ್ರಪಂಚದ ಬಂಧನಗಳನ್ನೆಲ್ಲ ಮೀರುವ ನಿರಾಕಾರ ಹಾಗು ಸಾಕಾರ 'ಲಿಂಗ' ದ ಅನುಭವ ಗಳೆರಡನ್ನು ಜಗದ ನಿಯಮದನುಸಾರ ಪಡೆದು, ಅಜ್ಞಾನ ವನ್ನು ಕಳೆಯುವ ಮತ್ತು ಜೀವನ ಮರಣಗಳ ಚಕ್ರವ್ಯೂಹ ದಿಂದ ಮುಕ್ತ ನಾಗಿಸುವವನೇ 'ಗುರು'. ಸಿದ್ಧರಾಮರು ನಮಗೆ ಹೇಳುವುದೇನೆಂದರೆ 'ಗುರು'ವಿನ ಕರುಣೆಯಿಂದ, ಅವರ ದೇಹ, ಮನಸ್ಸು ಮತ್ತು ಸಂಪತ್ತು ಎಲ್ಲವೂ ಐಹಿಕವಾಗಿ ತಮ್ಮ ಕೊಳೆಯನ್ನು ಕಳೆದುಕೊಂಡವು. ಅಷ್ಟೇ ಅಲ್ಲ ತಮ್ಮನ್ನು ಶೈವ ತತ್ತ್ವಾನುಭವಕ್ಕೆ ಪ್ರವೇಶ ಮಾಡಿಸಿದ ಹಾಗೂ ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದ ಗುಣಗಳ ಪ್ರಾಮುಖ್ಯತೆಯನ್ನು ಅರಿವು ಮಾಡಿಸಿದ ಗುರುಗಳಿಗೆ ಮಾನ್ಯತೆ ನೀಡುತ್ತಾರೆ. ಅಂದರೆ ಸಿದ್ಧರಾಮರ ಅಂಗೈಯಲ್ಲಿ ಲಿಂಗವನ್ನಿಟ್ಟು ತಮ್ಮ ಕೈಯನ್ನು ಅವರ ಹಣೆಯ ಮೇಲಿಟ್ಟು ಗುರುಗಳಾದ ಚೆನ್ನಬಸವಣ್ಣನವರು ಸಿದ್ಧರಾಮರ ಮನಸ್ಸು ಮತ್ತು ಸಂಕಲ್ಪವನ್ನು ದೈವಜ್ಯೋತಿಯಿಂದ ಬೆಳಗಿದರು.

## 'ಲಿಂಗ' :

ಭಕ್ತನಾದವನು ಹೃದಯಪೂರ್ವಕವಾಗಿ ಲಿಂಗಪೂಜೆಯನ್ನು ಮಾಡಬೇಕು ಮತ್ತು ಲಿಂಗದ ತೇಜಸ್ಸನ್ನು ಗಮನಿಸಬೇಕು, ಎಂದು ಹೇಳುವಾಗ ಸಿದ್ಧರಾಮರ ಆತ್ಮ ಸಂತೋಷಕ್ಕೆ ಮೇರೆಯೇ ಇರುವುದಿಲ್ಲ. ತನ್ನ ಅಂಗೈಯಲ್ಲಿದ್ದ ಇಷ್ಟಲಿಂಗವನ್ನು ಕಂಡೊಡನೆ ಸಿದ್ಧರಾಮರ ಹೃದಯ ಅತಿಯಾದ ಪ್ರೀತಿಯಿಂದ ತುಂಬಿ ಬಂತು, ಅವರ ಶರೀರ ಕಾಣದಂತೆ ಕರಗಿ ಹೋಯಿತು. ಅವರ ಆತ್ಮವನ್ನೆಲ್ಲ ಭಗವಂತ ಆವರಿಸಿದ. ತನ್ನ 'ಇಷ್ಟಲಿಂಗ' ವನ್ನು ಕುರಿತು ಸಿದ್ಧರಾಮರು ಹೀಗೆ ಹೇಳುತ್ತಾರೆ. 'ಓ ಸಿಗಲಾರದ ಶಿವ, ನಿನ್ನನ್ನು ಮುಟ್ಟುವವರು ಯಾರೂ ಇಲ್ಲ. ನನ್ನ ಗುರುಗಳು ನಿನ್ನನ್ನು ನನ್ನ ಅಂಗೈಯ ಮೇಲೆ ಪ್ರತಿಷ್ಠಾಪಿಸಿದ್ದಾರೆ. ಓ ಲಿಂಗ, ನನ್ನ ಶರೀರದ ಸ್ಪರ್ಶಜ್ಞಾನವೆಲ್ಲ ಕಳೆದು ಹೋಗುವವರೆಗೂ ನಿನ್ನ ಸೊಬಗನ್ನು ನನ್ನ ನಯನಗಳಲ್ಲಿ ಹೀರುವುದು ಯಾವಾಗ? ಅಂಥ ಘಳಿಗೆಯನ್ನು ಯಾವಾಗ ನೋಡುವೆನೊ. ನಿನ್ನನ್ನು ಎಲ್ಲಾ ರೀತಿಯಲ್ಲಿಯೂ ಕಂಡು ಆನಂದಿಸುವ ಅಪೂರ್ವ ಹಾಗೂ ಅದ್ಭುತ ಸಮಯವನ್ನು ಒಬ್ಬನೇ ಅನುಭವಿಸಲು ಹೇಗೆ ಕಾಯಲಿ?'

ಭಕ್ತನಾದವನು ಇಷ್ಟಲಿಂಗವನ್ನು ಧರಿಸಿ ಆತ್ಮೋನ್ನತಿಗಾಗಿ ಮತ್ತು ಶ್ರೇಷ್ಠತೆಗಾಗಿ ಪೂಜಿಸಬೇಕಲ್ಲದೆ ಅದು ಜೀವನದ ಸಮಸ್ಯೆಗಳನ್ನು ಅಥವಾ ನಮ್ಮ ವಿಪತ್ತುಗಳನ್ನು ಪರಿಹರಿಸುತ್ತದೆಂದಲ್ಲ. ಪರಮಶ್ರೇಷ್ಠ ದೈವದ ಸ್ವರೂಪವಾದ ಇಷ್ಟಲಿಂಗ, ನಿಜವಾದ ಪರಮಾನಂದವನ್ನು ಕೊಡುವ ಅಖಂಡ ಪ್ರಜ್ಞೆಯನ್ನು ಒದಗಿಸುತ್ತದೆ. ಶಿವಜ್ಞಾನವೆಂಬುದು ಶಾಶ್ವತವಾದುದು, ಅಜ್ಞಾನವೆಂಬುದು ಅಶಾಶ್ವತವಾದುದು. ಶರೀರ ಕ್ಷಣಿಕವಾಗಿರುವಂತೆಯೇ ಲಿಂಗವು ಶಾಶ್ವತವಾದುದು. ಭಕ್ತನು ಲಿಂಗವನ್ನು ಪೂಜಿಸಿದಾಗ ಇಡೀ ವಿಶ್ವವನ್ನೇ ಪೂಜಿಸಿದಂತೆ.

ಮತ್ತೆ ತೊಡಕಿನಿಂದ ಕೂಡಿದ ಮತ್ತು ಗಹನವಾದ ವೀರಶೈವ ತತ್ತ್ವಜ್ಞಾನ ತಿಳಿಸಲು, ಸಿದ್ಧರಾಮರು ಸರಳ ಹಾಗೂ ಸುಂದರವಾದ ರೂಪಕಾಲಂಕಾರಗಳನ್ನು ಉಪಯೋಗಿಸುತ್ತಾರೆ. ಅವರ ಕಾವ್ಯರಚನಾಶಕ್ತಿಗೆ ಈ ಕೆಳಗಿನ ಒಂದು ಗೀತೆಯೇ ಸಾಕು:

*'ಭಾಸ್ಕರನಲಡಗಿರುವ ಕಿರಣಗಳಂತೆ*
*ಬೀಜಗಳೊಳಿರುವ ವೃಕ್ಷಗಳಂತೆ*
*ಹಿತವೆನಿಪ ಹಾಲೊಳಗಿನ ಮೊಸರು ಬೆಣ್ಣೆಗಳಂತೆ*
*ನಿನ್ನೊಳಗಡಗಿಹುದು ಲಿಂಗವೆಂಬೆ*
*ನಿನ್ನಲೀ ನೀ ನಾ ಲಿಂಗವ ಕಂಡರೆ*
*ಬ್ರಹ್ಮಾಂಡವನಿಡೀ ನೀಕಂಡಂತೆ*
*ಇಹುದಿದೇ ನಾನರಿತ (ವೀರಶೈವ)ನಿಜಹಾದಿ.'*

## ಜಂಗಮ :

ಜಂಗಮ ಎಂದರೆ ಜಗದೊಡೆಯ ಶಿವನ ಮತ್ತೊಂದು ರೂಪ. ಸಿದ್ಧರಾಮರು ಒಬ್ಬ ಆದರ್ಶ ಅಥವಾ ಪೂರ್ಣ ವ್ಯಕ್ತಿತ್ವದ ಜಂಗಮರ ಚಿತ್ರಣವನ್ನು ಕೊಡುತ್ತಾರೆ. ಹಾಗೂ ಅಂತಹವರನ್ನು ಕಪಟಿ ಮತ್ತು ಅಪೂರ್ಣ ರೀತಿಯ ಜಂಗಮರಿಂದ ಬೇರ್ಪಡಿಸುತ್ತಾರೆ. ಜಂಗಮನೆಂದರೆ ಒಬ್ಬ ಶಿವಯೋಗಿ. ಅವನು ಅಸ್ತಿತ್ವ(ಸತ್)ವನ್ನು, ಜಾಗ್ರತಾವಸ್ಥೆ(ಚಿತ್)ಯನ್ನು, ಮತ್ತು ಪರಮಸುಖ(ಆನಂದ)ವನ್ನು ಸಜೀವವಾಗಿ ಪ್ರದರ್ಶಿಸುತ್ತಾನೆ ಮತ್ತು ಶಿವನಲ್ಲಿ ಐಕ್ಯಗೊಳ್ಳುತ್ತಾನೆ. ಜಗತ್ತಿನ ಆಸೆಗಳಿಂದ, ಮತ್ತು ಅವುಗಳ ಬಂಧನಗಳಿಂದ, ಹೊಗಳುವಿಕೆ, ತೆಗಳಿಕೆಗಳಿಂದ, ನೋವು ನಲಿವುಗಳಿಂದ ಹಾಗೂ ಜನನ, ಮರಣಗಳ, ಚಕ್ರವ್ಯೂಹದಿಂದ ಅವನು ಬಿಡುಗಡೆ ಹೊಂದಿರುತ್ತಾನೆ. ಪರಿಪೂರ್ಣ ವ್ಯಕ್ತಿತ್ವವನ್ನು ಪಡೆದಿರುವ, ಕಾಯೇನ, ವಾಚಾ, ಮನಸಾ ಪರಿಶುದ್ಧನೆನಿಸಿರುವ ಜಗದೊಡೆಯನಾದ ಪರಶಿವನೇ ನಿಜವಾದ ಜಂಗಮ.

ಸಿದ್ಧರಾಮರು ಹಾಗೂ ಇತರ ಶರಣರು ಹೇಳುವಂತೆ, ವೀರಶೈವ ತತ್ತ್ವಜ್ಞಾನದ ಅನುಸಾರ, ಮುಖ್ಯ ವಾಗಿ ಜಂಗಮನ ಮುಖ್ಯಭಾಗ ಭಕ್ತನದು, ಭಕ್ತನ ಮುಖ್ಯ ಭಾಗ ಜಂಗಮನದು. ತಾತ್ವಿಕವಾಗಿ ಭಕ್ತ ಮತ್ತು ಜಂಗಮನ ನಡುವೆ ಯಾವುದೇ ವ್ಯತ್ಯಾಸವಿಲ್ಲ. ಭಕ್ತ ಪಾನೀಯವಿದ್ದಂತೆ, ಜಂಗಮ ಅದರ ರುಚಿ ಇದ್ದ ಹಾಗೆ, ಜಂಗಮ ಬೇಡುವಂತಿಲ್ಲ, ಭಕ್ತ ಅವನು ಬೇಡುವವರೆಗೂ ಕಾಯುವಂತಿಲ್ಲ. ವೀರಶೈವ ನೀತಿ

ನಿಯಮಗಳಿಗೆ ಅಂಟಿ ಕೊಳ್ಳದ ಜಂಗಮ ಕೇವಲ ಜಂಗಮನ ವೇಷ ಧರಿಸುವುದರಿಂದ ಉಪಯೋಗವೇನು?

ಶಿವಾನುಭವದಲ್ಲಿ ಮಗ್ನನಾಗಿರುವವನೇ ನಿಜವಾದ ದೊಡ್ಡ ಜಂಗಮ. ಅವನು ಸಮಚಿತ್ತತೆಯೆಂಬ ಟೋಪಿಯನ್ನು ಬಿಗಿಯಾಗಿ ಧರಿಸುತ್ತಾನೆ. ಅನಂತವಾದ ಭಸ್ಮಧಾರಿಯಾಗಿರುತ್ತಾನೆ. ನಿರ್ಮಲವಾದ ಜಪಮಣಿಯನ್ನು ಧರಿಸುತ್ತಾನೆ. ವಿರಕ್ತಿಯ ಸೂಚಕವಾಗಿ ಸೊಂಟಪಟ್ಟಿ ಇರುತ್ತದೆ. ಅಂಗೈಯಲ್ಲಿ ಲಿಂಗವನ್ನು ಹಿಡಿದುಕೊಂಡು ಶಿವಜ್ಞಾನದ ಚಿಂತನೆಯಲ್ಲಿಯೇ ಸುಖಿಸುತ್ತಾನೆ. ಅವನಿಗೆ ದುರಭ್ಯಾಸಗಳಿರುವುದಿಲ್ಲ, ಮತ್ತು ಭೋಗಾಸಕ್ತಿಗಳಿಂದ ಅವನು ದೂರವಿರುತ್ತಾನೆ. ಸಿದ್ಧರಾಮರು ವರ್ಣಿಸಿದಂತೆ ಜಂಗಮ ಶಿವಯೋಗಿ. ತನ್ನ ಹಿತವನ್ನು ಚಿಂತಿಸದೆ, ಪರಹಿತವೆಂಬ ಉಡುಪನ್ನು ಧರಿಸಿರುತ್ತಾನೆ.

## ಷಟ್‌ಸ್ಥಲ ಸಿದ್ಧಾಂತ :

ವೀರಶೈವ ತತ್ವ ಸಿದ್ಧಾಂತದಲ್ಲಿ ಎತ್ತಿ ಕಾಣುವ ಒಂದು ಪ್ರಮುಖ ಅಂಶವೆಂದರೆ ಆರು ಅವಸ್ಥೆಗಳ (ಷಟ್‌ಸ್ಥಲ) ಆಧ್ಯಾತ್ಮ ವ್ಯವಸ್ಥೆ. ಈ ವ್ಯವಸ್ಥೆಯನ್ನು ಒಳಗೊಂಡಿರುವ ಕಾರ್ಯವಿಧಾನದಲ್ಲಿ ಭಕ್ತನಾದವನು ಆಧ್ಯಾತ್ಮಿಕ ಪಯಣದಲ್ಲಿ ತೊಡಗುತ್ತಾನೆ. ಕ್ರಮೇಣ ಅದು ವ್ಯಕ್ತಿಯ ಆತ್ಮವನ್ನು ಭಗವಂತನಾದ ಶಿವನಲ್ಲಿ ಐಕ್ಯಗೊಳಿಸುತ್ತದೆ. ಶಿವಭಕ್ತ ಯಾವಾಗಲೂ ಕರುಣಾಮೂರ್ತಿಯಾಗಿದ್ದು, ಶಿವಜ್ಞಾನದಿಂದ ತುಂಬಿದ್ದು, ಸರ್ವ ಜೀವಿಗಳನ್ನು ಏಕರೀತಿಯಾಗಿ ಪರಿಗಣಿಸುತ್ತಾನೆಂದು ಸಿದ್ಧರಾಮರು ಸೂಚಿಸುತ್ತಾರೆ. ಭಕ್ತನಿಂದ ನ್ಯಾಯವಾದ ಬದುಕನ್ನು ನಿರೀಕ್ಷಿಸಬೇಕು ಮತ್ತು ಅವನು ಸದಾ ಶಿವಜ್ಞಾನದ ಚಿಂತನೆ ನಡೆಸುತ್ತಾ, ಕೃತಿಯಲ್ಲಿ, ಶಿವನಲ್ಲಿ ಕಡೆಯದಾಗಿ ಐಕ್ಯವಾಗುವ ಗುರಿಯನ್ನು ತೋರ್ಪಡಿಸಬೇಕು.

ನಮ್ಮ ಶರೀರ, ಐಹಿಕ ಸಂಪತ್ತು, ದುಃಖ ದುಮ್ಮಾನಗಳು, ಮೋಡದ ಹಾಗೆ, ಮರೀಚಿಕೆಯಂತೆ, ಮಳೆಬಿಲ್ಲಿನಂತೆ, ಅಥವಾ ಕನಸಿನಂತೆ, ಅಲ್ಪಕಾಲವಿದ್ದು ಮಾಯವಾಗುತ್ತವೆ. ಆದ್ದರಿಂದ, ಸಿದ್ಧರಾಮರು ಕ್ಷಣಿಕವಾದ ಇಹಲೋಕದ ಆಸೆಗಳಿಂದ ನಮ್ಮ ಗಮನವನ್ನು ಸೆಳೆದು ಶಿವನಲ್ಲಿ ಐಕ್ಯವಾಗುವುದರಲ್ಲಿ ಸಿಗುವ ಶಾಶ್ವತ ಸುಖವನ್ನು ಪಡೆಯುವುದರ ಬಗ್ಗೆ ಪ್ರಯತ್ನಿಸಲು ಒತ್ತು ನೀಡುತ್ತಾರೆ. ಮಹೇಶ, ಪ್ರಸಾದಿ, ಪ್ರಾಣಲಿಂಗಿ ಮತ್ತು ಶರಣ ಇವೆಲ್ಲ ಆತ್ಮ ಸಾಕ್ಷಾತ್ಕಾರದ ಹಾದಿಯಲ್ಲಿ ಸಾಗುವಾಗ ಅಂತಿಮವಾಗಿ ಮೋಕ್ಷಸಿದ್ಧಿಗೆ ಮೊದಲು ದಾಟಬೇಕಾದ ಆಧ್ಯಾತ್ಮಿಕ ಹಂತಗಳು.

ಕಾಮ, ಕ್ರೋಧ, ಆಸೆ, ಅಹಂಕಾರ, ಅಸೂಯೆ ಮೊದಲಾದುವನ್ನು ಕಳೆದುಕೊಂಡಾತನೇ ಶರಣ. ಅವನು ಒಬ್ಬ ಉನ್ನತ ವ್ಯಕ್ತಿ, ಧರ್ಮಶೀಲ ಮತ್ತು ಗುಣಸಂಪನ್ನ ಹಾಗೂ ನುಡಿದಂತೆ ನಡೆಯುವವ ಮತ್ತು ನಡೆದಂತೆ ನುಡಿಯುವವ. ಸುಖ ದುಃಖಗಳು ಅಥವಾ ಹೊಗಳುವಿಕೆ ಮತ್ತು ತೆಗಳುವಿಕೆಗಳಿಂದ ಅವನು ಪ್ರಭಾವಿತನಾಗದವನು. ಅವನು ಜೀವನ ಕ್ರಮದಿಂದ ಲಿಂಗಸ್ವರೂಪಿಯಾಗದವನು. ಅವನ ಮಾತು ಲಿಂಗಾನುಗ್ರಹದಿಂದ ಕೂಡಿರುತ್ತದೆ. ಯಾವುದೇ ಅದೃಷ್ಟ ಅಥವಾ ದುರಾದೃಷ್ಟ ಬರಲಿ ಅದನ್ನು ಅವನು ಶಿವಾನುಗ್ರಹವೆಂದು ಸಮಚಿತ್ತದಿಂದ ಸ್ವೀಕರಿಸುತ್ತಾನೆ. ಶರಣನು ಯೋಚನಾತೀತ ಮತ್ತು ಮಾತಿಗೂ ಮಿಗಿಲಾದವನು ಅಂದರೆ ಶಿವಸ್ವರೂಪಿಯೇ ಅವನು.

ಸಿದ್ಧರಾಮರು ದೇವರ ಬಳಿ ಬೇಡುತ್ತಾರೆ, 'ಶಬ್ದದಲ್ಲಿ ನಿಶ್ಶಬ್ದತೆ ಐಕ್ಯಗೊಂಡಂತೆ, ಮತ್ತು ಸೂರ್ಯಕಿರಣಗಳು ಸೂರ್ಯಾಸ್ತ ಸಮಯದಲ್ಲಿ ಅನಂತತೆಯಲ್ಲಿ ಲೀನವಾದಂತೆ ನೀನು ಎಂದು ನನ್ನನ್ನು ಐಕ್ಯಗೊಳಿಸಿಕೊಳ್ಳುವೆ?' ಅವನು ತನ್ನ ಅನೇಕ ವಚನಗಳಲ್ಲಿ, ಶಿವನಲ್ಲಿ ಐಕ್ಯಗೊಳ್ಳುವ ಕುರಿತು ವಿವರಿಸುತ್ತಾನೆ. 'ನೋಡು, ಬೆಳಕಿನೊಡನೆ, ಇನ್ನು ಕತ್ತಲೆಯ ಸಂಪರ್ಕವಿಲ್ಲ'. ನಾನು ಶಿವನೊಡನೆ ಐಕ್ಯವಾಗುವ ತನಕ ನನ್ನ ಜೀವನವನ್ನು ಅವನ ಕೈಯಲ್ಲಿಯೇ ಬಿಡುತ್ತೇನೆ. ಸಾಗರಕ್ಕೆ ಹರಿಯುವ ನದಿಗಳು, ಸಾಗರವೇ ಆಗುತ್ತವೆ. ನನ್ನ ಜೀವಾತ್ಮ ಲಿಂಗದಲ್ಲಿ ಐಕ್ಯಗೊಂಡಾಗ ನನ್ನ ಜ್ಞಾನೇಂದ್ರಿಯಗಳು ದೈವೀಕರಿಸಲ್ಪಡುತ್ತವೆ. (ಇಂದ್ರಿಯ) ಅಂಗ ಮತ್ತು ಲಿಂಗಗಳು ಅಂತಿಮವಾಗಿ ಒಂದಾದಾಗ ಅವುಗಳಲ್ಲಿ ವ್ಯತ್ಯಾಸವಿರುವುದಿಲ್ಲ, ಏಕೆಂದರೆ ಅವುಗಳು ಒಂದೇ ಆಗಿರುತ್ತವೆ.

ದ್ವೈತವೆನಿಸುವ 'ನಾನು' ಹುತ್ತು 'ನೀನು' ಗಳು ಶಿವನಲ್ಲಿ ಐಕ್ಯಗೊಳ್ಳುವ ಆಧ್ಯಾತ್ಮದ ಕೊನೆಯ ಹಂತದಲ್ಲಿ ಮಾಯವಾಗುತ್ತವೆ. ಪ್ರಾರಂಭದಲ್ಲಿ ಗುರು ಮತ್ತು ಶಿಷ್ಯ, ಲಿಂಗ, ಮತ್ತು ಭಕ್ತರ ನಡುವೆ ಭಕ್ತನಾದವನು ವ್ಯತ್ಯಾಸವನ್ನು ಗುರುತಿಸಿದರೂ, ಪರಮಶ್ರೇಷ್ಠನಾದ ಭಗವಂತನಲ್ಲಿ ಐಕ್ಯಗೊಂಡು ಪರಮಸುಖವನ್ನು ಪಡೆದ ನಂತರ, ಮೊದಲಿದ್ದ ಮನದ ಭ್ರಮೆಗಳೆಲ್ಲ ನಿವಾರಣೆಯಾಗುತ್ತವೆ. ಆಗ ಭಕ್ತನ ಆತ್ಮ ಶೂನ್ಯದಲ್ಲಿ, ಶಿವ, ಲಿಂಗವಾಗಿ ಒಂದಾಗುತ್ತದೆ.

## ಶಿವಯೋಗಿ :

ಚೆನ್ನಬಸವಣ್ಣನವರಿಂದ ಆಧ್ಯಾತ್ಮ ಜೀವನವನ್ನು ಪ್ರಾರಂಭಿಸಿದ ಹಾಗೂ ಇಷ್ಟಲಿಂಗವನ್ನು ಪಡೆದ ಸಿದ್ಧರಾಮ ಅತ್ಯುತ್ತಮ ಯೋಗಿಗಳಾಗಿ ಬೆಳೆದು ಎಲ್ಲಾ ವಿಧದ ಯೋಗಗಳನ್ನೂ ಶಿವಯೋಗವು ಮೀರುತ್ತದೆ ಎಂಬುದನ್ನು ಅರ್ಥಮಾಡಿಕೊಂಡಿದ್ದರು. ಗುರುಗಳ ಕೃಪೆಯಿಂದ ಅವರೊಬ್ಬ ಶುದ್ಧ ಶಿವಯೋಗಿಗಳಾದರು, ಅಲ್ಲದೆ ಶಿವ





ಯೋಗವೆಂಬುದಕ್ಕೆ ಕೊನೆ ಎಂಬುದೇ ಇಲ್ಲವೆಂದು ಅರಿತರು. ನಮಗೆ ಕಾಣುವುದು ನಾಶವಾಗುತ್ತದೆ, ನಿರಾಕಾರ ವಾದದ್ದು ನಿಜವಾದದ್ದು ಉಳಿದಿರುತ್ತದೆ. ಯಾವುದು ಶೂನ್ಯವೋ ಅದು ಮಾತ್ರವೆ ಅವಿನಾಶಿಯಾದದ್ದು. ಅವರು ಇಷ್ಟಲಿಂಗವನ್ನು ಧ್ಯಾನಿಸಿದರು. ಅಂದರೆ ಅದು ನಿರಾಕಾರ ವಾದದ್ದು. ಸಾಕಾರವಾದಾಗ ಹಾಗೂ ಸಾಕಾರವಾದದ್ದು ನಿರಾಕಾರವಾದಾಗ ಹಾಗೆ, ಆಕಾರ, ನಿರಾಕಾರಗಳೆರಡನ್ನೂ ಕುರಿತು ಚಿಂತನೆ ನಡೆಸುವುದೇ ವೀರಶೈವ ತತ್ವಜ್ಞಾನದ ಲಕ್ಷಣಗಳು.

## ಆಚರಣೆ ಮತ್ತು ನಿಯಮಗಳು :

ವೀರಶೈವ ತತ್ವಜ್ಞಾನ ಮತ್ತು ನೀತಿ ಸಂಹಿತೆಯ ಮತ್ತೊಂದು ವೈಶಿಷ್ಟ್ಯತೆ ಎಂದರೆ ಅದಕ್ಕೆ ಸಂಬಂಧಪಟ್ಟ ಆಚರಣೆ ಮತ್ತು ನಿಯಮಗಳು. ಶಿವನಲ್ಲಿ ಐಕ್ಯವಾಗುವ ಆಧ್ಯಾತ್ಮಿಕ ಗುರಿಸಾಧನೆಗೆ ಭಕ್ತನು ಪ್ರಥಮ ಆದ್ಯತೆ ಕೊಡಬೇಕಾದದ್ದು ಈ ನೀತಿ ಸಂಹಿತೆಗೆ ಬದ್ಧನಾಗಿರುವುದರ ಮೂಲಕ. ಸಿದ್ಧರಾಮರು ತಿಳಿಸುವುದೇನೆಂದರೆ, ಕೆಲವರು ದೈವತ್ವದ ಬಗ್ಗೆ ತಿಳಿದಿದ್ದಾರೆ, ಆದರೆ ಕ್ರಿಯಾಶೀಲತೆ ಇರುವುದಿಲ್ಲ. ಇತರರು ಕ್ರಿಯಾಶೀಲರಾಗಿರುತ್ತಾರೆ, ಆದರೆ ದೈವೀಜ್ಞಾನವನ್ನು ಪಡೆದಿರುವುದಿಲ್ಲ. ಶಿವನೊಡನೆ ಐಕ್ಯವಾಗಲು ದೈವಜ್ಞಾನ ಮತ್ತು ಉತ್ತಮ ನಡವಳಿಕೆ ಎರಡೂ ಇರಬೇಕು. ಯಾರ ಕೆಲಸ ಮತ್ತು ಮಾತು ಎರಡೂ ಒಂದೇ ಆಗಿರುತ್ತದೆಯೋ ಅವರು ಶಿವನಿಗೆ ಬೇಕಾದವರಾಗಿರುತ್ತಾರೆ.

ವೀರಶೈವ ತತ್ತ್ವಜ್ಞಾನದ ಪ್ರಧಾನ ನಿಯಮಗಳಲ್ಲಿ ಒಂದೆಂದರೆ ತನ್ನನ್ನು ತಾನು ಅರಿತುಕೊಳ್ಳುವುದು. ಸಿದ್ಧರಾಮರು ಒತ್ತಿ ಹೇಳುವುದು ಏನೆಂದರೆ ತಮ್ಮನ್ನು ತಾವು ಅರಿತುಕೊಳ್ಳುವುದಾಗಿ ಶಪಥ ಮಾಡಿರುವವರೆಂದರೆ ವೀರಶೈವರು. ಹಿಂದೆ ತಿಳಿಸಿರುವಂತೆ ಕೇವಲ ಜ್ಞಾನವೊಂದೇ ಸಾಕಾಗುವುದಿಲ್ಲ. ಉದಾಹರಣೆಗೆ ಸಿದ್ಧರಾಮರು ಸೂಚಿಸುವಂತೆ ತತ್ತ್ವಜ್ಞಾನಿಯ ಜ್ಞಾನ, ಯೋಚನೆಯಲ್ಲಿ ಹಾಗೂ ಚರ್ಚೆಯಲ್ಲಿ ನಷ್ಟವಾಗುತ್ತದೆ; ಪುರೋಹಿತನ ಜ್ಞಾನ, ಪದಗಳ ಉಚ್ಚಾರಣೆ (Mantras) ಯಲ್ಲಿ ಮುಗಿದುಹೋಗುತ್ತದೆ ಮತ್ತು ವಣಿಕನೊಬ್ಬನ ಜ್ಞಾನ, ಧನ ಸಂಪಾದನೆಯಲ್ಲಿಯೇ ನಷ್ಟವಾಗುತ್ತದೆ. ಈ ಎಲ್ಲಾ ಕೆಲಸ ಕಾರ್ಯಗಳು ಪುನರ್ಜನ್ಮ ಮತ್ತು ಪ್ರಾಪಂಚಿಕ ಬಂಧನಗಳಾಗಿವೆ. ಇವು ಅಂತಿಮವಾಗಿ ದೊರೆಯಬೇಕಾದ ಶಾಶ್ವತ ಆನಂದವನ್ನು ಪಡೆಯಲು ವಿರೋಧಗಳಾಗಿವೆ.

## ಸಮಾಜ ಮತ್ತು ಸಂಸ್ಕೃತಿ :

ಅನೇಕ ಬ್ರಾಹ್ಮಣ ಧರ್ಮಾಚರಣೆಗಳನ್ನು ಅಂದರೆ ಮನುಷ್ಯನ ದೌರ್ಬಲ್ಯ ಮತ್ತು ಕಪಟಾಚರಣೆಗಳನ್ನು ಬಿಂಬಿಸುವುವುಗಳನ್ನು ಸಿದ್ಧರಾಮರು ಟೀಕಿಸುತ್ತಾರೆ ಮತ್ತು ತೆಗಳುತ್ತಾರೆ. ಉದಾಹರಣೆಗೆ ಸಿದ್ಧರಾಮರು ಪ್ರಶ್ನಿಸುತ್ತಾರೆ; 'ನೀವು ಪಾಪ ಮಾಡಿ ಪವಿತ್ರವಾದ ನದಿಯೊಂದರಲ್ಲಿ ಸ್ನಾನ ಮಾಡಿದರೆ ಏನಾಯಿತು? ನೀವು ಪವಿತ್ರವಾದ ನದಿಯೊಂದರಲ್ಲಿ ಸ್ನಾನ ಮಾಡಿ ಆನಂತರ ಪಾಪ ಮಾಡಿದರೆ ಏನಾಗುತ್ತದೆ? ನಿಮ್ಮ ಪಾಪಗಳನ್ನು ತೊಳೆದುಕೊಳ್ಳಬಲ್ಲಿರಾ? ಪವಿತ್ರವಾದ ಗಂಗಾನದಿ ನಿಮಗೆ ಬಹುಮಾನಗಳನ್ನು ಕೊಡಬಲ್ಲುದೆ? ನಿಮ್ಮ ಪ್ರಾಪಂಚಿಕ ಬಂಧನಗಳು ಹಾಗೂ ಪಾಪಗಳನ್ನು ಕಳೆದುಕೊಳ್ಳದೆ, ದೈವದ ಬಗ್ಗೆ ಜ್ಞಾನವನ್ನು ಪಡೆಯದೆ, ಪ್ರಪಂಚ ವನ್ನೆಲ್ಲ ಸುತ್ತಾಡಿ, 'ಪುಣ್ಯ' ಕ್ಷೇತ್ರಗಳೆನಿಸಿದ ಕಾಶಿ(ವಾರಣಾಸಿ) ಮತ್ತು ರಾಮೇಶ್ವರಗಳಿಗೆ ಹೋದರೆ, ಅದರಿಂದ ಆಗುವ ಫಲವೇನು? ನೀವು ಯಾತ್ರೆ ಮಾಡುವಾಗ ನೀವು ನೋಡುವುದು ಕೇವಲ ಸನ್ಯಾಸಿಗಳನ್ನು ಭಗವಂತನಾದ ಶಿವನ ಸೃಷ್ಟಿಯನ್ನಲ್ಲ.

ಅಷ್ಟೇ ಅಲ್ಲ, ಸಿದ್ಧರಾಮರು ಕೇವಲ ಮಂತ್ರಗಳ ಪಠಣ ಮಾಡುವುದನ್ನು, ಜಪಮಣಿಗಳನ್ನು ಧರಿಸುವುದನ್ನು, ಮತೀಯ ಪುಸ್ತಕಗಳ ವಾಚನವನ್ನು, ಅಥವಾ ವೀರಶೈವ ನಿಯಮಗಳು, ಆಚರಣೆ ಮತ್ತು ಶಿವಜ್ಞಾನವನ್ನು ತಿಳಿದುಕೊಳ್ಳದೆ ಇದ್ದು ಕಾವಿಬಣ್ಣದ ಬಟ್ಟೆ ಧರಿಸುವುದನ್ನು ಒಪ್ಪುವುದಿಲ್ಲ. ಹಾಗೆಯೇ ಅವರು ಸ್ವರ್ಗ ಮತ್ತು ನರಕಗಳ ಕಲ್ಪನೆಯನ್ನು ತಿರಸ್ಕರಿಸುತ್ತಾರೆ. ಮತ್ತು ಫಲಜ್ಯೋತಿಷ್ಯದ ಒಳ್ಳೆಯ ಮತ್ತು ಕೆಟ್ಟ ಕಾಲ ಹಾಗೂ ಸ್ಥಳಗಳ ಭವಿಷ್ಯವಾಣಿಗಳ ಬಗ್ಗೆಯೂ ಅವರು ನಂಬುವುದಿಲ್ಲ. ಸರ್ವಾಂತರ್ಯಾಮಿಯಾದ ಶಿವನು ಅಗಾಧವಾದ ಚೈತನ್ಯವನ್ನು ಎಲ್ಲಾ ಕಡೆ ತುಂಬಿರುವುದರಿಂದ ಎಲ್ಲಾ ಸ್ಥಳಗಳೂ, ಕಾಲಗಳೂ ಮಂಗಳಕರವೇ ಆಗಿವೆ ಎಂಬುದು ಅವರ ಅಭಿಪ್ರಾಯ.

ಸಿದ್ಧರಾಮರು ಶಿವನನ್ನು ಬಿಟ್ಟು ಬೇರೊಬ್ಬ ದೇವರನ್ನು ಒಪ್ಪದೇ ಏಕದೇವ ಪೂಜಾತತ್ವವನ್ನು ಪ್ರತಿಪಾದಿಸುತ್ತಾರೆ. ಬಹುದೇವರು, ದೇವತೆಗಳನ್ನು ಪೂಜಿಸುವವರಿಗೆ ಅನುಗ್ರಹವಾಗಲೀ ಆಶೀರ್ವಾದವಾಗಲೀ ಸಿಗುವುದಿಲ್ಲ. ದೇವರು ಅಂಥವರನ್ನು ಭಯಂಕರವಾದ ಬೆಂಕಿಯ ಕೊಂಡದಲ್ಲಿ ಹಾಕುತ್ತಾನೆ. ಅವರು ಶೈವರು ಮತ್ತು ವೀರಶೈವರ ನಡುವೆ ಸ್ಪಷ್ಟವಾದ ಭೇದವನ್ನು ಮಾಡುತ್ತಾರೆ. ಶೈವರು ದೇವಸ್ಥಾನದಲ್ಲಿ ಸ್ಥಾಪನೆಗೊಂಡಿರುವ ಶಿವನ ಮೂರ್ತಿಯನ್ನು ಪೂಜಿಸುತ್ತಾರೆ. ವೀರಶೈವರು ಗುರುವಿನ ಅನುಗ್ರಹದಿಂದ ಪಡೆದಿರುವ ಇಷ್ಟಲಿಂಗವನ್ನು ಪೂಜಿಸುತ್ತಾರೆ.

ವೀರಶೈವ ತತ್ವಜ್ಞಾನಿಗಳು, ಶರಣರ ನಡುವೆ ಗಮನಿಸಬೇಕಾದ ಏಕಾಭಿಪ್ರಾಯವೊಂದಿದೆ. ವೀರಶೈವ ಸಂಘಟನೆಯ ತಳಹದಿಯೇ ಅದು. ಸಿದ್ಧರಾಮರ ಪ್ರಕಾರ ಯಾವ ವ್ಯಕ್ತಿಯೂ ಉಚ್ಚ ಅಥವಾ ನೀಚ ವರ್ಗದಲ್ಲಿ ಹುಟ್ಟಿದವನೆಂದು ಪರಿಗಣಿಸಲ್ಪಡುವುದಿಲ್ಲ. ಶಿವಾನುಭವದಿಂದ ದೊರೆತ

ಜ್ಞಾನ ಯಾರೊಬ್ಬರ ಸ್ಥಾನವನ್ನು ಹುಟ್ಟಿನಿಂದ ಅಳೆಯುವುದಿಲ್ಲ. ಶಿವನನ್ನು ಕುರಿತು ಧ್ಯಾನಿಸುವ ಮತ್ತು ಅವನನ್ನು ಪೂಜಿಸುವ ಎಲ್ಲಾ ಭಕ್ತರೂ, ಅವರು ಹುಟ್ಟಿದ ಜಾತಿಯನ್ನು ಪರಿಗಣಿಸದೆ ಸಮಾನರಾಗಿ ಎಣಿಸಲ್ಪಡುತ್ತಾರೆ. ಅಸಮಾನತೆಯ ತಳಹದಿಯ ಮೇಲೆ ನಿಂತಿರುವ ಜಾತಿ ಪದ್ಧತಿಯನ್ನು ಸಿದ್ಧರಾಮರು ಒಪ್ಪುವುದಿಲ್ಲ. ಮಿಗಿಲಾಗಿ ಚಾತುರ್ವರ್ಣ ಆಧಾರಿತ ಜಾತಿ ಪದ್ಧತಿಯನ್ನು ಮೀರಿ ನಿಲ್ಲಬಲ್ಲವನೇ ವೀರಶೈವ. ಸಿದ್ಧರಾಮರು ಲಿಂಗಬೇಧವನ್ನು ಒಪ್ಪದೆ ಲಿಂಗ ಸಮಾನತೆಯನ್ನು ಬಲವಾಗಿ ಪ್ರತಿಪಾದಿಸುತ್ತಾರೆ. ಅವರು ಅನ್ನುತ್ತಾರೆ,

*ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ*

**ಭವಿಷ್ಯವಾಣಿ :**

ಎಂಟು ನೂರು ವರ್ಷಗಳಿಗೂ ಹಿಂದೆ ಸಿದ್ಧರಾಮರು ಮಾಡಿದ ಕೆಲವು ಭವಿಷ್ಯವಾಣಿ, ಕಾಲಜ್ಞಾನ ಇವುಗಳ ಚಿಂತನೆ ಹಾಗೂ ವಿಶ್ಲೇಷಣೆ ಮಾಡುವುದು ಆಸಕ್ತಿಕರವಾಗಿದೆ. ಹುಳುಹುಪ್ಪಟೆಗಳು ಆಹಾರವಾಗಿ ಉಪಯೋಗಿಸಲ್ಪಡುವ ಬಗ್ಗೆ ಮುಂದಾಗಿ ಹೇಳಿದ್ದರು. ಭಯಂಕರವಾಗಿ ಮಳೆ ಸುರಿಯುವುವು. ಅಸಂಖ್ಯಾತ ಜಾತಿ, ಉಪಜಾತಿಗಳೆಲ್ಲ ಸೇರಿ ಒಂದಾಗುವುದು, ರಾಜ, ರಾಣಿಯರೆಲ್ಲ ಸಾಮಾನ್ಯರಂತೆ ಕೆಲಸ ಮಾಡ ಬೇಕಾಗುವುದು, ಸತ್ಯವೆನ್ನುವುದು ಇಲ್ಲವಾಗುವುದು ಮತ್ತು ಉತ್ತಮತೆ ಎನ್ನುವುದು ಅಪರೂಪವೆನಿಸುವುದು, ಮೋಸ, ಕೊಲೆ, ಕಳ್ಳತನ, ಕಾಮುಕತನ, ದುರಾಸೆ ಜಗತ್ತಿನಲ್ಲಿ ಹರಡುವುದು. ಆತ್ಮಜ್ಞಾನಿಗಳು, ಭೌತಿಕವಾದಿಗಳು ಅತ್ತಿತ್ತ ಚದುರುವರು. ಎಲ್ಲರೂ ಗೊಂದಲಗೊಳ್ಳುವರು, ಅಷ್ಟೇ ಅಲ್ಲದೆ ಸಿದ್ಧರಾಮರು ಸಾಂಕೇತಿಕವಾಗಿ ಸುವರ್ಣ ಗೋಪುರದ ನಾಶವೊಂದನ್ನು ಸೂಚಿಸುವ ಮೂಲಕ, ಧರ್ಮದ ನಾಶದ ಬಗ್ಗೆ ಮುಂದಾಗಿ ತಿಳಿಸಿದ್ದಾರೆ. ಅದೇ ರೀತಿ ಜಪಮಣಿಗಳು ಚದುರಿ ಮಾಯ ವಾಗುವುದು; ಹಿರಿಯರು, ಶಿಕ್ಷಕರು ಗೌರವ ಮತ್ತು ಪ್ರಾಮುಖ್ಯತೆ ಯನ್ನು ಕಳೆದುಕೊಳ್ಳುವುದು; ಗೋಹತ್ಯೆಗಳು ನಡೆಯುವುದು ಮತ್ತು ಸೊನ್ನಲಿಗೆಯ ನೈತಿಕ ಕೇಂದ್ರದ ಅವನತಿ ಮೊದ ಲಾದುವುಗಳ ಸೂಚನೆ.

**ಉಪಸಂಹಾರ :**

ವೀರಶೈವ ತತ್ವಸಿದ್ಧಾಂತ ಮತ್ತು ಆಧ್ಯಾತ್ಮ ಯೋಗಕ್ಕೆ ಸಿದ್ಧರಾಮರು ಕೊಟ್ಟಿರುವ ಕೊಡುಗೆಯ ಬಗ್ಗೆ ಈ ಮುಂದೆ ಕೊಟ್ಟಿರುವ ಚರ್ಚೆ ಪ್ರತಿಪಾದನೆ ಕೊಡುತ್ತದೆ. ಅವರ ವಚನಗಳು ಕನ್ನಡ ಸಾಹಿತ್ಯವನ್ನು ಕೇವಲ ಸಂಪದ್ಯುಕ್ತ ಮಾಡಿರುವುದಲ್ಲದೆ ವೀರಶೈವ ತತ್ತ್ವಜ್ಞಾನಿ ಕವಿಗಳ ಮೇಲೆ ಕಾಲಾನುಕಾಲದಲ್ಲಿ ಗಾಢವಾಗಿ ಪರಿಣಾಮ ಬೀರಿದೆ. ತತ್ತ್ವಜ್ಞಾನಿ ಕವಿಯಾದ ಸಿದ್ಧರಾಮರು ಜೀವನವನ್ನು ದೀಪಕ್ಕೆ ಹೋಲಿಸುವುದಲ್ಲದೆ ಒಂದು ಮೋಡಕ್ಕೂ ಹೋಲಿಸಿದ್ದಾನೆ.

*'ಜೀವನವೊಂದು ದೀಪ, ಒಮ್ಮೆ ಅದು ಹೊಳೆಯುತ್ತದೆ,*
*ಮತ್ತೊಮ್ಮೆ, ಗಾಳಿಯೊಂದು ಬೆಳಕನಾರಿಸುತ್ತದೆ.*
*ಜೀವನವೊಂದು ಮೋಡ ; ಒಮ್ಮೆ ಅದು ಮೇಲಿರುತ್ತದೆ,*
*ಮತ್ತೊಮ್ಮೆ, ನಾಶವಾಗುತ್ತದೆ ಅದರ ಮಹತ್ತು'*

ವೀರಶೈವ ಧರ್ಮ, ತತ್ತ್ವ ಸಿದ್ಧಾಂತ, ಆಧ್ಯಾತ್ಮ ಯೋಗ ಇವುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲರಿಗೂ ಅಭ್ಯಸಿಸಲು ಸಿದ್ಧರಾಮಶಿವಯೋಗಿಗಳ ವಚನಗಳು ಅತಿ ಮುಖ್ಯ. ಅವರ ವಿಶಾಲವಾದ ಮತ್ತು ಆಳವಾದ ಜ್ಞಾನ, ಅವರ ವಿಚಾರಪೂರಿತ ವಚನಗಳಲ್ಲಿ ತುಂಬಿರುವ ವೀರಶೈವರ ಆಧ್ಯಾತ್ಮ ಜೀವನ ಶೈಲಿ, ಇನ್ನೂ ಹೆಚ್ಚು ಅಭ್ಯಾಸ ಮಾಡಲು, ಮತ್ತು ಕ್ರಮಬದ್ಧ ಸಂಶೋಧನೆ ನಡೆಸಲು ಯುಕ್ತವಾಗಿದೆ.

*

ಕುಲಜನಾಗಿ ನಾನೇವೆನಯ್ಯಾ ?
ಕುಲದ ಬಳಿಯ ದೇವನಲ್ಲ, ಮನದ ಬಳಿಯ
ದೇವನ್ಯೆಸೆ ? ಆವಯೋನಿನಿಜವಾದಡೇನು ?
ನೀನೊಲಿದವನೆ ಕುಲಜನಯ್ಯ ಕಪಿಲ
ಮಲ್ಲಿಕಾರ್ಜುನಾ ।

* * *

ಕುಲವೆಂದು ಹೋರಾಡುವ ಅಣ್ಣಗಳಿರಾ ನೀವು
ಕೇಳಿರೋ?
ಕುಲವೇ ಡೋಹಾರಕಕ್ಕಯ್ಯನ? ಕುಲವೇ
ಮಾದಾರ ಚೆನ್ನಯ್ಯನ?
ಕುಲವೇ ದೂರ್ವಾಸನ? ಕುಲವೇ ವ್ಯಾಸನ,
ಕುಲವೇ ವಾಲ್ಮೀಕಿಯ?
ಕುಲವ ನೋಲ್ಪಡೆ ಹುರುಳಿಲ್ಲ, ಅವರ ನಡೆಯ
ನೋಳ್ಪಡೆ ತ್ರಿಲೋಕದಲ್ಲಿ ಯಾರುಂಟು ಹೇಳಾ
ಕಪಿಲ ಸಿದ್ಧಮಲ್ಲಿಕಾರ್ಜುನಾ?

* * *

ಓದಿದ ಫಲ ಕೂಚಭಟ್ಟನಂತಾಗಬಾರದು ;
ಓದಿದ ಫಲ ಪಾರಾಶನನಂತಾಗಬಾರದು ;
ಓದಿದ ಫಲ ಮಯೂರನಂತಾಗಬಾರದು ;
ಓದಿದ ಫಲ ನಮ್ಮ ಹಾವಿನ ಹಾಳ ಕಲ್ಲಯ್ಯನ
ಮನೆಯ ಶ್ವಾನನಂತಾಗಬೇಕು ಕಾಣಾ ಕಪಿಲಸಿದ್ಧ
ಮಲ್ಲಿಕಾರ್ಜುನ

– ಸೊನ್ನಲಿಗೆಯ ಸಿದ್ಧರಾಮ





# ಭಾರತೀಯತೆ ಮತ್ತು ಗೋವು

## ಮಹಾಭಾರತ ಅನುಶಾಸನ ಪರ್ವ

**ಯಾ**ವುದೇ ಯಜ್ಞ ಅಥವಾ ಯಾಗವನ್ನು ದಧಿ ಮತ್ತು ಘೃತ ಅಂದರೆ ಮೊಸರು ಮತ್ತು ತುಪ್ಪಗಳ ಅರ್ಪಣೆ ಇಲ್ಲದೇ ಆಚರಿಸಲು ಸಾಧ್ಯವಿಲ್ಲ.



ಮೊಸರು ಮತ್ತು ತುಪ್ಪಕ್ಕೆ ಹಸುವಿನ ಹಾಲಿನ ಅವಶ್ಯಕತೆ ಇದೆ. ಹಸುವಿನ ಹಾಲಿಗೆ ಹಸುವಿನ ಅವಶ್ಯಕತೆ ಇದೆ. ಹಸುಗಳು ನಿಸ್ವಾರ್ಥ ಹಾಗೂ ತ್ಯಾಗದ ಸಂಕೇತ. ಅವುಗಳಿಲ್ಲದೆ ಯಾವುದೇ ಹವನ ಹೋಮ ಸಾಧ್ಯವಿಲ್ಲ. ಏಕೆಂದರೆ ಹಸುಗಳಿಂದಲೇ ಹವ್ಯ ಮತ್ತು ಕಾವ್ಯ ಸಾಧ್ಯ. ಹಸುಗಳು ಪಾವಿತ್ರ್ಯದ ಸಂಕೇತ ಮತ್ತು ಇಷ್ಟಾರ್ಥಗಳನ್ನು ನೀಡುವಂಥವು ಪ್ರಪಂಚವನ್ನು ಸಾಕುವುದರಲ್ಲಿ ಹಸುಗಳ ಸ್ಥಾನ ಶ್ರೇಷ್ಠವಾದದ್ದು. ಹಸುಗಳು ಪ್ರಾಣದಾಯಿಗಳು.

ದಾನಗಳಲ್ಲಿ ಗೋದಾನವನ್ನು ಅತಿ ಶ್ರೇಷ್ಠವಾದದ್ದೆಂದು ಕರೆಯಲಾಗಿದೆ. ತಾವು ಶ್ರೇಷ್ಠವಾದುದರ ಜೊತೆಗೆ ಹಸುಗಳು ಶುದ್ಧತೆ ಹಾಗೂ ಪಾವಿತ್ರ್ಯವನ್ನು ಕಾಪಾಡುವಂತಹವು. ಶಾಂತಿ ಹಾಗೂ ಸಮೃದ್ಧಿಗಾಗಿ ಹಸುಗಳನ್ನು ಪ್ರೀತಿಸಬೇಕು ಹಾಗೂ ಪ್ರೀತಿಯಿಂದ ಸಾಕಬೇಕು. ಗೋಮೂತ್ರ ಹಾಗೂ ಗೋಮಯ ಗಳು ಶುದ್ಧತೆ ಹಾಗೂ ಪಾವಿತ್ರ್ಯಕ್ಕಾಗಿ ಅವಶ್ಯಕವಾದವು. ಅವುಗಳ ಬಗ್ಗೆ ಯಾರೂ ಹೇಸಿಗೆ ಪಡಬಾರದು.

**ಪಂಡಿತರು ಹಾಗೂ ಮಹಾಭಾರತದ ಅನುವಾದಕರೂ ಆದ ಶ್ರೀ ಕಿಸರಿ ಮೋಹನ ಗಂಗೂಲಿ ಹೀಗೆ ಅಭಿಪ್ರಾಯ ಪಡುತ್ತಾರೆ:** ಹಿಂದಿನ ಕಾಲದ ಋಷಿ, ಮುನಿಗಳು ಹಸುಗಳಲ್ಲಿರುವ ಕಾಂತೀಯ ಶಕ್ತಿಯನ್ನು ಅದರ ಅತಿ ವಿಶಿಷ್ಟ ಗುಣಗಳನ್ನು ಅರಿತಿದ್ದರು. ಒಂದೇ ತರಹದ ಆಹಾರವನ್ನು ಒಂದು ಹಸು ಮತ್ತು ಒಂದು ಕುದುರೆಗೆ ತಿನ್ನಿಸಿ ನೋಡಿದರೆ ತಿಳಿಯುತ್ತದೆ ಕುದುರೆಯ ಲದ್ದಿಯಿಂದ ಅನಾರೋಗ್ಯಕರ ಹಾಗೂ ಕೆಟ್ಟ ವಾಸನೆ ಹೊರಡುತ್ತದೆ. ಆದರೆ ಆದೇ ಗೋಮಯ ಅಥವಾ ಸಗಣಿ ಅತ್ಯುತ್ತಮವಾದ ಕ್ರಿಮಿನಾಶಕ (disinfectant) ಗೋಮೂತ್ರ ಹಾಗೂ ಗೋಮಯಗಳು. ವಿಶಿಷ್ಟವಾದ ಗುಣ ಸತ್ವಗಳನ್ನು ಹೊಂದಿದೆ.

**ಮಹರ್ಷಿ ವೇದವ್ಯಾಸರು ಹಸುವಿನ ಶ್ರೇಷ್ಠತೆ ಹಾಗೂ ಶುದ್ಧಕಾರಕ ಗುಣದ ಬಗ್ಗೆ ಹೇಳಿದ್ದಾರೆ :**

ದೇಹ ಶುದ್ಧಿಗಾಗಿ ಒಬ್ಬನು ಮೂರು ದಿನಗಳ ಕಾಲ ಕೇವಲ ಬಿಸಿ ಗೋಮೂತ್ರವನ್ನು ಕುಡಿಯಬೇಕು. ಆನಂತರದ ಮೂರು ದಿನ ಕೇವಲ ಹಸುವಿನ ಬಿಸಿ ಹಾಲನ್ನು ಸೇವಿಸಬೇಕು. ತದನಂತರದ ಮೂರು ದಿನ ಬಿಸಿ ತುಪ್ಪವನ್ನು ಸೇವಿಸಬೇಕು. ಹಾಗೂ ಕೊನೆಯ ಮೂರು ದಿನ ಕೇವಲ ವಾತಾಹಾರಿಯಾಗಬೇಕು. (ಕೇವಲ ಗಾಳಿಯನ್ನು ಮಾತ್ರ ಸೇವಿಸಬೇಕು)

ಹಸುಗಳು ಸರ್ವಪ್ರಾಣಿಗಳ ಆಶ್ರಯದಾತರು. ಶ್ರೇಷ್ಠ ಗುಣಗಳೆಲ್ಲವೂ ಹಸುಗಳಲ್ಲಿ ಅಡಕವಾಗಿವೆ. ಗೋಮತಿ ಮಂತ್ರಗಳ ಬಲದಿಂದ ಉತ್ತಮವಾದ ನೂಗನನ್ನು ಉತ್ತಮ ಪಾತಿಯನ್ನೂ ಪಡೆಯಬಹುದಾಗಿದೆ. ಹಸುಗಳಿಗಿಂತ ಶ್ರೇಷ್ಠ ವಾದುದು ಯಾವುದೂ ಇಲ್ಲ. ಪ್ರಪಂಚದ ಸರ್ವ ಶಕ್ತಿಗಳ ಮೂಲವೇ ಹಸು.

**ವಸಿಷ್ಠ ಮುನಿ ಹೀಗೆ ಹೇಳುತ್ತಾರೆ :**

ಗೋಮಯವನ್ನು ಬೆರೆಸಿದ ನೀರಿನಲ್ಲಿ ಸ್ನಾನ ಮಾಡು ವುದರಿಂದ ಜನರು ಶುದ್ಧರೂ ಪವಿತ್ರರೂ ಆಗುತ್ತಾರೆ. ಎಲ್ಲ ಚರಾಚರ ವಸ್ತುಗಳನ್ನು ಶುದ್ಧೀಕರಿಸಲು ಬಳಸಬಹುದಾಗಿದೆ.

ಗೋವುಗಳು ಪ್ರಪಂಚದ ಮಾತೆಯರಿದ್ದಂತೆ ಏಕೆಂದರೆ ಮಾನವ ಶಿಶು ತನ್ನ ಪ್ರಥಮ ಮೂರು ವರ್ಷಗಳ ತಾಯಿಯ ಮೊಲೆ ಹಾಲನ್ನು ಕುಡಿದು ಬೆಳೆಯುತ್ತದೆ. ನಂತರ ಬಾಲ್ಯ, ತಾರುಣ್ಯ ಹಾಗೂ ವೃದ್ಧಾಪ್ಯ ಅಂದರೆ ಜೀವನದುದ್ದಕ್ಕೂ ಹಸುವಿನ ಹಾಲನ್ನು ಕುಡಿಯುತ್ತಾನೆ. ಹಾಲಿನ ಉಪ ಉತ್ಪನ್ನಗಳನ್ನು ಸೇವಿಸುತ್ತಾರೆ, ಬದುಕುತ್ತಾನೆ. ಹೀಗೆ ಹಸು ಮಾನವನ ಸಾಕುತಾಯಿಯಾಗಿ ನಿಲ್ಲುತ್ತದೆ. ತಾಯಿಯನ್ನು ಕೊಲ್ಲುವುದು ಹೆತ್ತ ತಾಯಿಯಾಗಲಿ, ಸಾಕುತಾಯಿಯಾಗಲೀ, ಎಷ್ಟು ಅವಹೇಳನಕಾರಿ ಹಾಗೂ ನಿಷಿದ್ಧವೋ ಪ್ರಪಂಚದ

ಮಾತೆಯಾದ ಹಸುವನ್ನು ಕೊಲ್ಲುವುದೂ ಅಷ್ಟೇ ಅವಹೇಳನಕಾರಿ ಹಾಗೂ ನಿಷಿದ್ಧ.

ಮಾನವ ಜೀವನದಲ್ಲಿ ಹಸುವಿನ ಮಹತ್ವ ಬಹಳ ಹಿರಿದು. ಹಾಲು ಮಜ್ಜಿಗೆ ಮೊಸರುಗಳ ಮೂಲಕ ಆಹಾರ ಮೂಲವಾಗುವುದಲ್ಲದೆ ಎತ್ತಿನ ರೂಪದಲ್ಲಿ ದೈಹಿಕ ಶ್ರಮ ದಿನ ನೀಡಿ ತನ್ನ ಗೋಮೂತ್ರ ಗೋಮಯಗಳಿಂದ ಗೊಬ್ಬರ ಹಾಗೂ ಕ್ರಿಮಿನಾಶಕ ರೋಗ ನಾಶಕಗಳಾಗಿ ವರ್ತಿಸಿ ಮಾನವನ ಜೀವನವನ್ನು ತೂಗಿಸುತ್ತದೆ.

ಭಾರತದ ಪುರಾಣಗಳಲ್ಲಿ ಬಳಸಿರುವಂತೆ ಗೋವು ದೇವತೆಗಳು ಮಾನವನಿಗೆ ನೀಡಿದ ವರಗಳಲ್ಲಿ ಒಂದು. ಅದು ಕಾಮಧೇನು ಜನಿಸಿದ್ದು ಸಮುದ್ರ ಮಥನದಲ್ಲಿ. ಹಿಂದಿಯಲ್ಲಿ ಗುಜ್(Guj) ಎಂದು ಹೇಳುವುದು ಭೂಮಿ ಅಥವಾ ಪೃಥ್ವಿಯ ಸಂಕೇತವೂ ಹೌದು (ಗ್ರೀಕ್ ಪುರಾಣದ ಗುಜ್) ಹೀಗೆ ಸಾಂಕೇತಿಕವಾಗಿ ಗೋವು ಪವಿತ್ರ ಭೂಮಾತೆಯನ್ನು ಪ್ರತಿನಿಧಿಸುತ್ತದೆ. ಹೇಗೆ ಭೂಮಾತೆ ಎಲ್ಲ ಜೀವರಾಶಿಗಳನ್ನು ತನ್ನ ಮಕ್ಕಳಂತೆ ಕಾಪಾಡುವಳೊ ಹಾಗೆ ಗೋಮಾತೆಯೂ ತನ್ನಿಂದ ಹಾಗೂ ತನ್ನ ಉತ್ಪನ್ನಗಳಿಂದ ಜಗತ್ತನ್ನು ಸಲಹುತ್ತಾಳೆ. ಅಂತೆಯೇ ಗೋವು 33 ಕೋಟಿ ದೇವತೆಗಳ ಆವಾಸ ಸ್ಥಾನವಾದ ಕಾಮಧೇನು.

ಗೋವಿಗೂ ಕೃಷ್ಣ ಭಗವಾನನಿಗೂ ಅವಿನಾಭಾವ ಸಂಬಂಧ ಗೋವಿಲ್ಲದ ಗೋಪಾಲನನ್ನೂ ನೆನಸಿಕೊಳ್ಳುವುದೇ ಕಷ್ಟ. ಕೃಷ್ಣ ಭಗವಂತನಾಗಿದ್ದೂ, ಗೋಪಾಲ. ಅಂದರೆ ಗೋವನ್ನು ಪಾಲಿಸುವವನು ಎನ್ನಿಸಿಕೊಂಡ. ಇಷ್ಟರಿಂದಲೇ ನಾವು ಮನುಷ್ಯನಿಗೂ ಗೋವಿಗೂ ಇರಬೇಕಾದ ಸಂಬಂಧವನ್ನು ಕಲ್ಪಿಸಿಕೊಳ್ಳಬಹುದು.

ಯಾವುದು ಹೇಗೆ ಇರಲಿ, ಮೂಲತಃ ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ಗೋ ಸಂಪತ್ತು ನಿಜವಾದ ಸಂಪತ್ತು(ಆಸ್ತಿ) ಎನಿಸಿಕೊಳ್ಳುತ್ತದೆ. ಹಸುಗಳಿಂದಲೇ ಎತ್ತುಗಳು. ಎತ್ತುಗಳು ಕೃಷಿಗೆ ಆಧಾರ ಹಾಗೂ ಸಾಗಾಣಿಕೆಯ ಸಾಧನ. ಅಲ್ಲದೇ ಹಸುವಿನ ಉತ್ಪನ್ನಗಳಾದ ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ, ಗಿಣ್ಣು, ತುಪ್ಪ ಇತ್ಯಾದಿಗಳು ಹಣ ಗಳಿಕೆಯ ಸಾಧನಗಳೂ ಹೌದು. ಹಸುವಿನ ಹಾಲು ಹಾಗೂ ಹಸುವಿನ ತುಪ್ಪಗಳನ್ನು ಅಮೃತಸಮಾನ ಎಂದು ಪರಿಗಣಿಸಲಾಗುತ್ತದೆ.

ರಾಜಸ್ಥಾನದ ಪಶುಸಂಗೋಪನ ಇಲಾಖೆಯ ಪೂರ್ವದ ನಿರ್ದೇಶಕರಾಗಿದ್ದ ಡಾ॥ ಭಂಡಾರಿಯ ಪ್ರಕಾರ ಹಸುವಿನ ಹೊಟ್ಟೆಯಲ್ಲಿರುವ ವಿಶಿಷ್ಟ ಬ್ಯಾಕ್ಟೀರಿಯಾಗಳಿಂದ ಹಸುವಿನ ಹಾಲು ತನ್ನ ವಿಶಿಷ್ಟತೆ ಹಾಗೂ ಮಾನವನಿಗೆ ಹೊಂದುವಂತಹ ಗುಣಗಳಿಂದ ಕೂಡಿದೆ. ಎಮ್ಮೆ ಹಾಲು ಇದಕ್ಕಿಂತ ಪೌಷ್ಟಿಕವಾದರೂ ಹಸುವಿನ ಹಾಲು ಸೇವನೆ ಬುದ್ಧಿಶಕ್ತಿಯ ತೀಕ್ಷ್ಣತೆ ದೈಹಿಕ ಚುರುಕುತನ ಹಾಗೂ ಭಾವನೆಗಳ ಸ್ಥಿರತೆಯನ್ನು ಹಾಗೂ ಸೌಮ್ಯಗುಣಗಳನ್ನು ಅದನ್ನು ಸೇವಿಸುವುದರಲ್ಲಿ ತಂದುಕೊಡುತ್ತದೆ.

ಭಾರತೀಯ ಮೂಲದ ಆಯುರ್ವೇದ ಪದ್ಧತಿಯಲ್ಲಿ ಗೋಮೂತ್ರಕ್ಕೆ ವಿಶಿಷ್ಟ ಸ್ಥಾನವಿದೆ. ಭಾರತೀಯ ಆಯುರ್ವೇದ ಸಂಸ್ಥೆಯ ನಿರ್ದೇಶಕರಾದ ಡಾ॥ ಸಿ.ಹೆಚ್.ಎಸ್. ಶಾಸ್ತ್ರಿಯವರ ಪ್ರಕಾರ 'ಹಲವಾರು ಆಯುರ್ವೇದೀಯ ಔಷಧಿಗಳಲ್ಲಿ ಗೋ ಮೂತ್ರವನ್ನು ಬಳಸಲಾಗುತ್ತದೆ. ವಿಶೇಷವಾಗಿ ಇಸಬಿನಂತಹ ಚರ್ಮವ್ಯಾಧಿಗಳ ಚಿಕಿತ್ಸೆಯಲ್ಲಿ ಗೋಮೂತ್ರ ಬಹಳ ಉಪಯುಕ್ತ.

ಎಲ್ಲರಿಗೂ ತಿಳಿದಿರುವಂತೆ ಗೋಮೂತ್ರ ಉತ್ತಮ ನಂಜುನಾಶಕ ಹಾಗೂ ಕ್ರಿಮಿನಾಶಕ. ಅದಕ್ಕೆಂದೇ ಹಿಂದೆ ಹಳ್ಳಿಯಲ್ಲಿ ಮಣ್ಣಿನ ಮನೆಗಳಿಗೆ ಗೋಮಯದ ಲೇಪನ ನೀಡಲಾಗುತ್ತಿತ್ತು. ಮನೆಯ ಮುಂದಿನ ಅಂಗಳಗಳನ್ನು ಗೋಮಯದಿಂದ ಸಾರಿಸಲಾಗುತ್ತಿತ್ತು. ಇಂದಿಗೂ ಸಹ ಹಳ್ಳಿಗಳಲ್ಲಿನ ಹಳೆಯ ಕಾಲದ ಕಣಜಗಳಿಗೆ ಗೋಮಯ ಲೇಪನವಿಲ್ಲದೇ ಬಳಸುತ್ತಿರಲಿಲ್ಲ. ಇದರಿಂದ ಯಾವುದೇ ಹುಳುಹುಪ್ಪಟೆ ಕೀಟಗಳ ಹಾನಿಯಿಂದ ಪದಾರ್ಥಗಳನ್ನು ಕಾಳುಕಡ್ಡಿಗಳನ್ನು ರಕ್ಷಿಸಬಹುದಾಗಿದೆ.

ಸಗಣಿ ಮತ್ತು ಒಣಹುಲ್ಲಿನ ಮಿಶ್ರಣದಿಂದ ಮಾಡಿದ ಬೆರಣಿಗಳು ಈಗಲೂ ಉರುವಲಾಗಿ ಬಳಸಲ್ಪಡುತ್ತದೆ. ಪಾರಂಪರಿಕ ಪ್ರಕಾರ ಬೆರಣಿ ತನ್ನ ಉಷ್ಣತೆಯನ್ನು ಒಂದು ವಿಶಿಷ್ಟ ಮಟ್ಟದಲ್ಲಿ ಉಳಿಸಿಕೊಳ್ಳುವುದರಿಂದ ಅದರಲ್ಲಿ ಬೇಯಿಸಿದ ಆಹಾರ ಪದಾರ್ಥಗಳು ತಮ್ಮಲ್ಲಿನ ಸತ್ವಗಳನ್ನು ಕಳೆದುಕೊಳ್ಳುವುದಿಲ್ಲ. ಅಲ್ಲದೆ ಬೆರಣಿಯ ಹೊಗೆ ಕ್ರಿಮಿನಾಶಕ ಗುಣ ಹೊಂದಿದೆ.

ಹಸುವಿನ ಸಗಣಿಯಿಂದ ಬಯೋಗ್ಯಾಸ್ (ಜೈವಿಕ ಅನಿಲ) ಪಡೆಯಬಹುದು ಹಾಗೂ ಜೈವಿಕ ಅನಿಲದಿಂದ ವಿದ್ಯುಚ್ಛಕ್ತಿ ಉತ್ಪಾದನೆ ಸಾಧ್ಯ. ವೈಜ್ಞಾನಿಕ ಪ್ರಯೋಗಗಳು ಗೋಮಯ(ಸಗಣಿ) ಸೂರ್ಯನ ವಿಕಿರಣತೆಯನ್ನು ತಡೆಯುವಲ್ಲಿ ಸಹಕಾರಿ ಎಂದು ತೋರಿಸಿಕೊಟ್ಟಿದೆ. ಗೋಮೂತ್ರದೊಂದಿಗೆ ಬೆರೆಸಿದ (ಗೋಮಯ) ಅತ್ಯುತ್ತಮ ಗೊಬ್ಬರವೂ ಹೌದು. ಸಗಣಿಗೊಬ್ಬರ ಇತರೆ ರಾಸಾಯನಿಕ/ರೈತರ ಗೊಬ್ಬರ ಭೂಮಿಯ ಅಂದರೆ ಮಣ್ಣಿನ ಸೌಳು





ತೇವವನ್ನು ಹಬ್ಬಿಸಿ ಬಂಜರನ್ನು ಮಣ್ಣಿನ ಫಲವತ್ತತೆ ಹಾಗೂ ಉಳಿಕೆಯನ್ನು ಹೆಚ್ಚಿಸುತ್ತದೆ. ಇದಕ್ಕೆಂದೇ ಪರಿಸರವಾದಿಗಳು, ವಿಚಾರವಾದ ಕೃಷಿಕರು ಸಗಣಿಯನ್ನು ಗೊಬ್ಬರವಾಗಿ ಬಳಸುತ್ತಾರೆ.

ಇದಕ್ಕೆಂದೇ ಇರಬೇಕು ನಮ್ಮ ಪುರಾಣಗಳಲ್ಲಿ ಗೋಮಯವನ್ನು ಲಕ್ಷ್ಮೀ ಎಂದು ಕರೆದದ್ದು.

ಇಂದಿಗೂ ಸಹ ಹಸುವಿನ ಉಪಯೋಗಗಳ ಬಗ್ಗೆ ಪ್ರಾಥಮಿಕ ಹಾಗೂ ಪಠ್ಯಗಳಲ್ಲಿ ಒಂದು ಪಾಠವಾದರೂ ಇದೆ. ಬದುಕಿದ್ದಾಗ ಹೋಗಲಿ, ಸತ್ತ ನಂತರವೂ ಅದರ ಚರ್ಮ, ಕೊಂಬು, ಮೂಳೆ, ಹಾಗೂ ಕರುಳುಗಳು ಉಪಯೋಗಕ್ಕೆ ಬಂದೇ ಬರುತ್ತದೆ.

ನಮ್ಮ ಪ್ರಾಚೀನ ಋಷಿ ಮುನಿಗಳು ಇವೆಲ್ಲವನ್ನೂ ಹಾಗೂ ಇನ್ನೂ ಹೆಚ್ಚನ್ನೂ ಅರಿತಿದ್ದರಿಂದಲೋ ಏನೋ ಎಷ್ಟೇ ವೈಜ್ಞಾನಿಕವಾಗಿ ಮುಂದುವರಿದರೂ ಗೋವಿನ ಶ್ರೇಷ್ಠತೆ ಅದರ ಗುಣಗಳನ್ನು ಸಂಪೂರ್ಣವಾಗಿ ಅರಿಯಲು ಸಾಧ್ಯವಿಲ್ಲ ವೆಂದು ನುಡಿದಿದ್ದಾರೆ.

ಈ ಮೇಲಿನ ಎಲ್ಲಾ ಕಾರಣಗಳಿಂದಲೇ ಭಾರತೀಯ ಸಂಸ್ಕೃತಿಯಲ್ಲಿ ಗೋವಿಗೆ ಪೂಜಾ ಸ್ಥಾನವನ್ನು ನೀಡಲಾಗಿದೆ. ಗೋವಿನ ಸ್ಮರಣೆಯಲ್ಲಿ ಹಲವು ಹಬ್ಬಗಳೂ ಜಾತ್ರೆಗಳೂ ನಡೆಯುತ್ತವೆ.

((ಸೂರ್ಯಾಸ್ತ) ಸಂಜೆ ಹಾಗೂ ರಾತ್ರಿಯ ಮಿಲನದ ಸಮಯ ಅಂದರೆ ಗೋಧೂಳಿ ಸಮಯ ಅಥವಾ ಮುಹೂರ್ತದ ಬಗ್ಗೆ ಹೆಚ್ಚಾಗಿ ಹೇಳುವ ಅವಶ್ಯಕತೆಯೇ ಇಲ್ಲ. ಇದರಂತಹ ಶುಭ ವೇಳೆ ಬೇರಾವುದೂ ಇಲ್ಲದೇ ಇಲ್ಲವೆಂದು ಹೇಳಲಾಗುತ್ತದೆ.

ಇನ್ನು ಪಂಚಗವ್ಯದ ಬಗ್ಗೆ : ಹಸುವಿನ ಹಾಲು, ಮೊಸರು, ತುಪ್ಪ, ಗೋಮೂತ್ರ ಹಾಗೂ ಗೋಮಯ ಇವುಗಳ ಸಂಗಮವೇ ಪಂಚಗವ್ಯ. ಇದರ ಸೇವನೆ ದೇಹ ಶುದ್ಧಿಕಾರಕ ಅಲ್ಲದೆ ಪಂಚಗವ್ಯವಿಲ್ಲದೆ ಯಾವುದೇ ಹವನ, ಹೋಮ, ಯಾಗಗಳು ಅಪೂರ್ಣವೆನಿಸುತ್ತದೆ. ಗೋದಾನ ದಾನಗಳಲ್ಲಿ ಅತಿ ಶ್ರೇಷ್ಠವಾದದ್ದು. ಗೋದಾನ ನೀಡಲು ಸಾಧ್ಯವಿಲ್ಲದವರು ಗೋ ಗ್ರಾಸವನ್ನಾದರೂ ನೀಡಬೇಕೆಂದು ಪುರಾಣಗಳು ಹೇಳುತ್ತವೆ.

ಭಾರತದೇಶದಲ್ಲಿ ಗೋರಕ್ಷಣೆಗೆಂದೇ ಗೋಶಾಲೆಗಳಿಗೂ ಪಿಂಜರಾಪೋಲ್‌ಗಳೂ ಇವೆ. ಇವುಗಳ ವಿಶೇಷತೆ ಎಂದರೆ ಇಲ್ಲಿ ಹಸುಗಳನ್ನು ಅವುಗಳಿಂದಾಗುವ ಲಾಭಕ್ಕಾಗಿ ಅಲ್ಲಿ ಅವುಗಳ ರಕ್ಷಣೆಗಾಗಿ ಸಾಕಲಾಗುತ್ತದೆ.

ಇಷ್ಟೆಲ್ಲಾ ಇದ್ದೂ ಇನ್ನೂ ಗೋವುಗಳೇಕೆ ಬೀದಿಗಳಲ್ಲಿ ವಾರಸುದಾರರು ಆರೈಕೆ ಮಾಡುವವರೂ ಇಲ್ಲದೆ ಸುತ್ತುತ್ತಿವೆ. ಏಕೆ ಇನ್ನೂ ಗೋಹತ್ಯೆ ಗೋಮಾಂಸ ಭಕ್ಷಣೆ ನಡೆಯುತ್ತಿದೆ?

ಇದಕ್ಕೆ ಉತ್ತರ ಸರಳವಲ್ಲ. ಸಂಕ್ಷೇಪವಾಗಿ ಹೇಳುವುದಾದರೆ ಎಲ್ಲಿಯವರೆಗೂ ಜನತೆ ಮತ್ತು ಸರ್ಕಾರಕ್ಕೆ ಈ ಬಗ್ಗೆ ಸಾಧನೆಯ ಇಚ್ಛಾಶಕ್ತಿಯಿಲ್ಲವೋ, ಎಲ್ಲಿಯವರೆಗೂ ನಾಗರಿಕರೆಂದುಕೊಳ್ಳುವ ವಿದ್ಯಾವಂತರು ಹಸುವನ್ನು ಇನ್ನೊಂದು ಪ್ರಾಣಿ ಎಂಬ ಭಾವನೆಯನ್ನು ಬದಲಿಸುವುದಿಲ್ಲವೋ ಅಲ್ಲಿಯವರೆಗೂ ಈ ಸ್ಥಿತಿ ಮುಂದುವರೆಯುತ್ತದೆ. ಇನ್ನಾದರೂ ಒಮ್ಮೆ ಕಣ್ಣು ತೆರೆದು, ಕಿವಿತೆರೆದು, ಗೋವಿನ ಈ ಆಕ್ರಂದನವನ್ನು ಆಲಿಸಿ,



*ಇಟ್ಟರೆ ಸಗಣಿಯಾದೆ ತಟ್ಟಿದರೆ ಕುರುಳಾದೆ*
*ಸುಟ್ಟರೆ ನೊಸಲಿಗೆ ವಿಭೂತಿಯಾದೆ*
*ತಟ್ಟದೆ ಹಾಕಿದರೆ ಮೇಲು ಗೊಬ್ಬರವಾದೆ*
*ನೀನಾರಿಗಾದೆಯೊ ಎಲೆ ಮಾನವ ?*

*ಹಾಲಾದೆ ಕರೆದರೆ, ಮೊಸರಾದೆ ಹೆತ್ತರೆ*
*ಮೇಲೆ ಕೆನೆಗಡೆದರೆ ಬೆಣ್ಣೆಯಾದೆ*
*ಮೇಲಾದ ತುಪ್ಪವು ನಾನಾದೆ ಕಾಸಿದರೆ*
*ನೀನಾರಿಗಾದೆಯೊ ಎಲೆ ಮಾನವ ?*

*ಉಳುವೆ ನಾ ಭೂಮಿಯನು ಹೊರುವೆ ನಾ ಹೇರನ್ನು*
*ತುಳಿದು ಕಡ್ಡಿಯ ಕಾಳು ವಿಂಗಡಿಸುವೆ*
*ಕಳಪೆಯಾಗಿಹ ನೆಲವು ನಗುವ ತೋಪನು ಮಾಳ್ವೆ*
*ನೀನಾರಿಗಾದೆಯೊ ಎಲೆ ಮಾನವ ?*

*ಹಾಯ ಹರಿಗೋಲಾದೆ ರಾಯ ಭೇರಿಗೆಯಾದೆ*
*ರಾಯರ ಕಾಲಿಗೆ ಮೊಳ್ಕೊತ್ತುವಾದೆ*
*ಆಯವರಿತು ಹೊಡೆಯೆ ಮಧುರಗಾನಕ್ಕಾದೆ*
*ನೀನಾರಿಗಾದೆಯೊ ಎಲೆ ಮಾನವ ?*

*ಹಾದಿ ಬೀದಿಯಲಿರುವ ಕಸದ ಹುಲ್ಲನು ಹುಡುಕಿ*
*ಮೇದು ಮನೆಗೈದು ನಾನಾಮೃತವನೀವೆ*
*ಅದನುಂಡು ನನಗೆರಡ ಬಗೆವ ಮಾನವ ಹೇಳು*
*ನೀನಾರಿಗಾದೆಯೊ ಎಲೆ ಮಾನವ ?*

(ಕೃಪೆ: ಬೆಳಕು, ಗೋರಕ್ಷಣಾ ವಿಶೇಷಾಂಕ)

## ವೀರಶೈವರು ಒಂದಾಗದಿದ್ದರೆ ಉಳಿಗಾಲವಿಲ್ಲ !

– ಸಾಹಿತ್ಯರತ್ನ ಅನ್ನದಾನಯ್ಯ ಪುರಾಣಿಕ, ೩೮ ಕ್ರಾಸ್, ೫ನೇ ಬ್ಲಾಕ್, ಜಯನಗರ, ಬೆಂಗಳೂರು –೪೧.

ಇಂದು ವೀರಶೈವರು ಎರಡು ಬಣಗಳಾಗಿ ಕಾದಾಡುತ್ತಿದ್ದಾರೆ. ವೀರಶೈವರು ಬೇರೆ, ಲಿಂಗಾಯಿತರು ಬೇರೆ ಎಂದು ವಾದಿಸುತ್ತಿದ್ದಾರೆ. ಇಬ್ಬರೂ ಒಂದೇ ಎನ್ನುವವರೂ ಇದ್ದಾರೆ. ಪಂಚಾಚಾರ್ಯರು ವೀರಶೈವ ಮತ ಸ್ಥಾಪಕರೆಂದು ಪಂಚ ಪೀಠಾಧೀಶರು ಮತ್ತು ಅವರ ಭಕ್ತರು ಹೇಳಿದರೆ, ಬಸವಣ್ಣ ಲಿಂಗಾಯಿತ ಮತಸ್ಥಾಪಕನೆಂದು ಕೆಲವರು ವಿರಕ್ತ ಮಠಾಧೀಶರು ಮತ್ತು ಅವರ ಭಕ್ತರು ಹೇಳುತ್ತಿದ್ದಾರೆ. ಈ ವಾದ ಪ್ರತಿವಾದಗಳಲ್ಲಿ ಸುಶಿಕ್ಷಿತರದೇ ಪ್ರಧಾನ ಪಾತ್ರ! ಸಾಮಾನ್ಯ ವೀರಶೈವರು ಈ ಗೊಂದಲದಲ್ಲಿ ಭಾಗವಹಿಸುತ್ತಿಲ್ಲ. ಕೆಲವರು ರಾಜಕಾರಣಿಗಳು ತಮ್ಮ ರಾಜಕೀಯ ಲಾಭಕ್ಕಾಗಿ ವೀರಶೈವ ಒಳ ಪಂಗಡಗಳ ಸಂಸ್ಥೆಗಳನ್ನು ಸ್ಥಾಪಿಸಿ, ವೀರಶೈವ ರಲ್ಲಿ ಇನ್ನಷ್ಟು ಒಡಕನ್ನು ಸೃಷ್ಟಿಸಿದ್ದಾರೆ. ಇದು ದುರದೃಷ್ಟಕರ. ಗುರುವಿರಕ್ತರನ್ನು ಕೂಡಿಸುವ ಪ್ರಯತ್ನಗಳು ಇವರೆಗೆ ಫಲಕಾರಿಯಾಗಿಲ್ಲ. ಕರ್ನಾಟಕದಲ್ಲಿ ಬಹುಸಂಖ್ಯಾತರಾಗಿರುವ ವೀರಶೈವರು(ಲಿಂಗಾಯಿತರು) ತಮ್ಮ ಒಳಜಗಳಗಳಿಂದ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಎಲ್ಲಾ ಕ್ಷೇತ್ರಗಳಲ್ಲಿಯೂ ಮುಖಂಡತ್ವವನ್ನು ಕಳೆದುಕೊಂಡಿದ್ದಾರೆ. ವೀರಶೈವರಲ್ಲಿ ಇಂದು ನಾಯಕತ್ವದ ಕೊರತೆ ಇದೆ! ವೀರಶೈವರನ್ನು ಒಂದು ಗೂಡಿಸಿ ಮುನ್ನಡೆಸಬಲ್ಲ ಮುಖಂಡರು ಇಂದು ಇಲ್ಲವೆನ್ನ ಬಹುದು. ಈ ದುಸ್ಥಿತಿ ಹೀಗೆಯೇ ಮುಂದುವರೆದರೆ ಕೆಲವು ವರ್ಷಗಳಲ್ಲಿ ವೀರಶೈವರು (ಲಿಂಗಾಯಿತರು) ಶೋಷಿತ ವರ್ಗಕ್ಕೆ ಸೇರಬಹುದು; ಆಳಬೇಕಾದವರು ಆಳಿಸಿಕೊಳ್ಳಬೇಕಾಗಬಹುದು.

ವೀರಶೈವರು ಮತ್ತು ಲಿಂಗಾಯಿತರು ಬೇರೆ ಎನ್ನುವ ವಾದ ಹುರುಳಿಲ್ಲದ್ದು. ಅಕಾಡೆಮಿಕ್(ತಾತ್ವಿಕ) ಹಾಗೆಯೇ ಮತ ಸ್ಥಾಪಕರ ವಾದ ಅಪ್ರಸ್ತುತ; ಅನಾವಶ್ಯಕ. ವೀರಶೈವ ಧರ್ಮವು ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಈ ಧರ್ಮದ ಮೂಲತತ್ವಗಳಾದ ಅಷ್ಟಾವರಣ, ಪಂಚಾಚಾರ ಹಾಗೂ ಷಟ್ ಸ್ಥಲಗಳು ಒಂದಿಲ್ಲೊಂದು ಸ್ವರೂಪದಲ್ಲಿ ಸಾವಿರಾರು ವರ್ಷಗಳಿಂದ ಆಚರಣೆಯಲ್ಲಿವೆಂಬುದು ನಿರ್ವಿವಾದ. ಮಹಂಜದಾರೋ ಹರಪ್ಪಾ ಉತ್ಖನನಗಳಿಂದ ಸಿಂಧೂ ಸಂಸ್ಕೃತಿ ಶೈವ ಸಂಸ್ಕೃತಿ ಆಗಿತ್ತೆಂಬುದು ಸ್ಪಷ್ಟವಾಗುತ್ತದೆ. ಪ್ರಪಂಚದ ಎಲ್ಲಾ ಪ್ರದೇಶಗಳಲ್ಲಿಯೂ ಶಿವೋಪಾಸಕರಿದ್ದರು ಮತ್ತು ಆಗ ಶಿವನೊಬ್ಬನೇ ದೇವನಾಗಿದ್ದ ಎಂಬುದಕ್ಕೆ ಸಾಕಷ್ಟು ಸಾಕ್ಷಿಗಳಿವೆ! ಎಲ್ಲಾ ಯುಗಗಳಲ್ಲಿಯೂ ಶಿವಲಿಂಗ ಪೂಜೆ ನಡೆದಂತೆ ತೋರುತ್ತದೆ. ಕಾಲಕ್ಕೆ ತಕ್ಕಂತೆ ಪೂಜಾ ವಿಧಾನಗಳು ಬೇರೆ ಬೇರೆಯಾಗಿರಬಹುದು ಮತ್ತು ತತ್ವಗಳ ಸ್ವರೂಪ ಭಿನ್ನವಾಗಿರಬಹುದು. ಮೂಲತತ್ವಗಳಲ್ಲಿ ಸುಧಾರಣೆಯಾಗಿರಬಹುದು. ಇದು ಸಹಜ! ಬೇರೆ ಧರ್ಮ ಗಳಲ್ಲಿಯೂ ಇಂತಹ ಪರಿವರ್ತನೆಗಳನ್ನು ಕಾಣಬಹುದು. ಇದರ ಬಗ್ಗೆ ಬಡಿದಾಡುವುದು ಬೇಡ. ಪರಿವರ್ತನೆ ಜೀವಂತಕ್ಕೆ ಸಾಕ್ಷಿ.

ವೀರಶೈವರು(ಲಿಂಗಾಯಿತರು) ಒಂದಾಗುವುದು ಅತ್ಯಾವಶ್ಯಕವಾಗಿದೆ. ಒಂದಾಗದಿದ್ದರೆ ಉಳಿಗಾಲವಿಲ್ಲ. ಇವರು ಒಂದಾಗಲು ಕೆಳಗಿನ ಕೆಲವು ಸೂತ್ರಗಳನ್ನು ಪಾಲಿಸಬಹುದು.

1. ವೀರಶೈವರು ಮತ್ತು ಲಿಂಗಾಯಿತರು ಒಂದು, ಇವು ಪರ್ಯಾಯ ಪದಗಳು
2. ವೀರಶೈವ ಧರ್ಮ ಅನಾದಿ ಧರ್ಮ. ಇದರ ಸ್ಥಾಪಕ ಪರಶಿವ.
3.ವೀರಶೈವರ ಧರ್ಮಗ್ರಂಥಗಳು; ಶಿವಾಗಮಗಳು (ಸಿದ್ಧಾಂತ ಶಿಖಾಮಣಿ) ಕಾಲಕ್ಕೆ ತಕ್ಕಂತೆ ಅವುಗಳಲ್ಲಾದ ಸುಧಾರಣೆ ಗಳನ್ನೊಳಗೊಂಡ ಚೆನ್ನಬಸವಣ್ಣನವರ ಕೃತಿಗಳು ಹಳೇ ಒಡಂಬಡಿಕೆ – (Old Testament) ಮತ್ತು ವಚನ ಸಾಹಿತ್ಯ (ಹೊಸ ಒಡಂಬಡಿಕೆ – New Testament) ಇವೆರಡಕ್ಕೂ 28 ಶಿವಾಗಮಗಳೇ ಆಧಾರ! ಶಿವಾಗಮಗಳ ಶ್ಲೋಕಗಳನ್ನು ಚೆನ್ನಬಸವಾದಿ ಶರಣರು ವಚನಗಳಲ್ಲಿ ಬಳಸಿದ್ದಾರೆ.
4. ವೀರಶೈವರ ಧರ್ಮ ಸಿದ್ಧಾಂತ: ಷಟ್‌ಸ್ಥಳ ಸಿದ್ಧಾಂತ: ಅಷ್ಟಾವರಣಗಳು ಪಂಚಾಚಾರಗಳು ಮತ್ತು ಷಟ್‌ಸ್ಥಲಗಳು





5. ವೀರಶೈವರ ಮೂಲಮಂತ್ರ : ಷಡಕ್ಷರ ಮಂತ್ರ : 'ಓಂ ನಮಃಶಿವಾಯ!'
6. ವೀರಶೈವರೆಲ್ಲರೂ ಸಮಾನರು ; ಇವರಲ್ಲಿ ಯಾವ ಭೇದವೂ ಇಲ್ಲ.
7. ವೀರಶೈವ ದರುಶನ : ಕಾಯಕ ಮತ್ತು ದಾಸೋಹ
8. ವೀರಶೈವರ ಆರಾಧ್ಯ ದೈವರು, ಪರಶಿವಯೋಗೀಶ್ವರ
9. ಶ್ರೀ ರೇಣುಕಾದಿ ಪಂಚಾಚಾರ್ಯರು ಶಿವಗಣಾಧೀಶ್ವರರು ವೀರಶೈವ ಧರ್ಮ ಪ್ರಸಾರಕರು ಮತ್ತು ಬಸವಾದಿ ಶರಣರು ವೀರಶೈವ ಧರ್ಮ ಸುಧಾರಕರು. ಈರ್ವರೂ ವಿಶ್ವವಿಭೂತಿ ಗಳು, ಜಗಮಾನ್ಯರು.
10. ಪ್ರತಿಯೊಬ್ಬ ವೀರಶೈವನು ಷಡಕ್ಷರಮಂತ್ರ 'ಓಂ ನಮಃ ಶಿವಾಯ'ವನ್ನೇ ಜಪಿಸಬೇಕು. ಎಲ್ಲಾ ಧಾರ್ಮಿಕ ಸಾಮಾಜಿಕ ಕಾರ್ಯಗಳಲ್ಲಿ ಇದೇ ಮಂತ್ರವನ್ನು ಬಳಸಬೇಕು. ಪ್ರತಿಯೊಬ್ಬ ವೀರಶೈವನ ಜಗುಲಿಯ ಮೇಲೆ ಯೋಗೀಶ್ವರ ಶಿವನ ಭಾವ ಚಿತ್ರ ರಾರಾಜಿಸಬೇಕು ಮತ್ತು ಅದರ ಪೂಜೆ ನಿತ್ಯ ನಡೆಯಬೇಕು.
11. ವೀರಶೈವರು ಪರಸ್ಪರ ಭೇಟಿಯಾದಾಗ 'ನಮಃ ಶಿವಾಯ' ಎಂದು ಅಥವಾ 'ಶಿವ ಶಿವ' ಎಂದು ಸಂಭೋದಿಸಬೇಕು. ಪರಶಿವನ ಚಿನ್ನದ ಪದಕಗಳನ್ನು ಧರಿಸಬೇಕು. ಪ್ರೀತಿ, ವಿಶ್ವಾಸ ಗೌರವದಿಂದ ಕಾಣಬೇಕು.
12. ವೀರಶೈವರ ಮದುವೆ, ಅಚಾರ ಮೊದಲಾದ ಧಾರ್ಮಿಕ ಕಾರ್ಯಗಳು ಸರಳ ರೀತಿಯಲ್ಲಿ ನಡೆಯಬೇಕು. ಅಂತರ ಪಂಗಡ ವಿವಾಹಗಳಿಗೆ ಪ್ರೋತ್ಸಾಹಿಸಬೇಕು; ವಿಧವಾ ವಿವಾಹ ಮನ್ನಿಸಬೇಕು. ವರದಕ್ಷಿಣೆ ವಧುದಕ್ಷಿಣೆ ಮೊದಲಾದ ಅನಿಷ್ಟ ಪದ್ಧತಿಗಳನ್ನು ಕೈಬಿಡಬೇಕು. ಪುರೋಹಿತಶಾಹಿ, ಅಧಿಕಾರ ಶಾಹಿ ಮತ್ತು ಉದ್ಯಮ ಶಾಹಿ ವಿರೋಧಿಸಬೇಕು. ಹೋಮ, ಹವನ, ಯಜ್ಞ ಯಾಗಾದಿಗಳನ್ನು ಜ್ಯೋತಿಷ್ಯ ಇತ್ಯಾದಿಗಳನ್ನು ಖಂಡಿಸಬೇಕು.
13. ವೀರಶೈವ ಪೀಠಾಧೀಶರು ವೀರಶೈವ ಧರ್ಮ–ಸಿದ್ಧಾಂತಗಳನ್ನು ಆಚರಣೆಯಲ್ಲಿ ತರುವುದಕ್ಕೆ ಆದ್ಯತೆ ನೀಡಬೇಕು. ಮತ್ತು ಅವುಗಳಂತೆ ನಡೆದು ಇತರರಿಗೆ ಮಾರ್ಗದರ್ಶಕರಾಗಬೇಕು. ವೀರಶೈವರ ದುಃಸ್ಥಿತಿಗೆ ವೀರಶೈವ ತತ್ವಗಳನ್ನು ಆಚರಿಸದಿರುವುದೇ ಮೂಲಕಾರಣ. ಪಂಚಾ ಚಾರಗಳನ್ನು ಪಾಲನೆ ಮಾಡದಿರುವುದೇ ಸಮಾಜದ ಹಿನ್ನಡೆಗೆ ಮುಖ್ಯ ಕಾರಣವಾಗಿದೆ. ಅವರು ಚಲನಶೀಲ ರಾಗಬೇಕು.
14. ವೀರಶೈವ ತತ್ವಗಳನ್ನು ಭೋದಿಸುವ ಪೀಠಗಳು ಪ್ರಾರಂಭ ವಾಗಬೇಕು. ಅವುಗಳಲ್ಲಿ ತರಬೇತಿ ಪಡೆದವರನ್ನು ಧರ್ಮ ಪ್ರಚಾರಕರನ್ನಾಗಿ ನೇಮಿಸಬೇಕು. ಬೇಸಿಗೆಯ ರಜೆಯಲ್ಲಿ ವಿದ್ಯಾರ್ಥಿಗಳು ಮತ್ತು ವಿದ್ಯಾರ್ಥಿನಿಯರಿಗೆ ಹಾಗೂ ಯುವಕರಿಗೆ ಧರ್ಮ ತತ್ವ ಆಚರಣೆಗಳ ಪರಿಚಯ ಮತ್ತು ಆಚರಣೆ ತಿಳಿಸುವ ಕೋರ್ಸ್‌ನ್ನು ಪ್ರಾರಂಭಿಸಬೇಕು.

ವೀರಶೈವ ಧರ್ಮವು ಆಚಾರ ಪ್ರಧಾನವಾದ ಧರ್ಮ. ಆಚಾರವೇ ಸ್ವರ್ಗ–ಅನಾಚಾರವೇ ನರಕ. ಅನಾಚಾರಿಗಳು ದುಷ್ಟರು, ಭ್ರಷ್ಟರು, ಶೋಷಕರು, ವಂಚಕರು, ಹಿಂಸಕರು, ದ್ರೋಹಿಗಳು, ಅಧರ್ಮಿಗಳು, ಮೊದಲಾದವರನ್ನು ವೀರಶೈವರು ಬಹಿಷ್ಕರಿಸಬೇಕು; ಶಿಕ್ಷಿಸಬೇಕು. ಪಂಚಾಚಾರಗಳನ್ನು ಪಾಲಿಸಬೇಕು.
ಬಸವಣ್ಣ ಪ್ರಣೀತ ವಾದ

***ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ***
***ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ***
***ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ***
***ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ.***
***ಇದೇ ನಮ್ಮ ಕೂಡಲಸಂಗಮನೊಲಿಸುವ ಪರಿ !***

ಎಂಬ ಸಪ್ತ ಸೂತ್ರಗಳ ವಚನವು ವೀರಶೈವರಿಗೆ (ಲಿಂಗಾಯಿತರಿಗೆ) ನಿತ್ಯ ಪಠಿಸುವ ಅಚರಿಸುವ ಮಂತ್ರವಾಗಬೇಕು.
15. ವೀರಶೈವರ ಮಹಾಪರಿಷತ್ತನ್ನು ಸ್ಥಾಪಿಸಬೇಕು. ಈ ಪರಿಷತ್ತುಗಳಲ್ಲಿ ಪ್ರಮುಖ ವೀರಶೈವ ಸ್ವಾಮಿಗಳು., ಸಮಾಜದ ಮುಖಂಡರು, ಪ್ರಮುಖ ಶಿಕ್ಷಣ ತಜ್ಞರು ಪ್ರಮುಖ ಉದ್ಯಮಿಗಳು, ಪ್ರಮುಖ ವೀರಶೈವ ಕೃಷಿಕರು ಹಾಗು ಪ್ರಮುಖ ವೀರಶೈವ ವಿಜ್ಞಾನಿಗಳನ್ನು ಒಳಗೊಂಡಿರಬೇಕು.

ಈ ಪರಿಷತ್ತಿನ ಅಧಿವೇಶನವು ಪ್ರತಿವರ್ಷ, ಎರಡು ಸಾರೆ ನಡೆದು ವೀರಶೈವರ ಪ್ರಮುಖ ಸಮಸ್ಯೆಗಳನ್ನು ಕುರಿತು ಚರ್ಚಿಸಿ, ಪರಿಹಾರ ಸೂಚಿಸಬೇಕು. ವೀರಶೈವರಿಗೆ ಮಾರ್ಗ ದರ್ಶನ ಮಾಡಬೇಕು. ವೀರಶೈವ ಧರ್ಮತತ್ವಗಳನ್ನು ಉಲ್ಲಂಘಿಸಿದವರನ್ನು ಬಹಿಷ್ಕರಿಸಬೇಕು; ಶಿಕ್ಷಿಸಬೇಕು.

ವೀರಶೈವರನ್ನು ಒಂದುಗೂಡಿಸುವುದರಲ್ಲಿ ವೀರಶೈವ ಯುವಕ ಯುವತಿಯರು ಪ್ರಧಾನ ಪಾತ್ರವನ್ನು ವಹಿಸಬೇಕು. ಅವರ ಭವ್ಯ ಭವಿಷ್ಯಕ್ಕಾಗಿ ಅವರು ಕಾರ್ಯೋನ್ಮುಖರಾಗಬೇಕು. ವೀರಶೈವ ಧರ್ಮ ಒಂದು, ವೀರಶೈವ ಆರಾಧ್ಯ ದೇವರು ಪರಶಿವ(ಇಷ್ಟಲಿಂಗ), ಅವರ ಪರಮಮಂತ್ರ

ಷಡಕ್ಷರ ಮಂತ್ರ– ಓಂ ನಮಃಶಿವಾಯ' ಅವರ ಧರ್ಮ–ಸಿದ್ಧಾಂತ ಷಟ್‌ಸ್ಥಲಗಳು, ಅವರ ಅಮರ ತತ್ವಗಳು ಕಾಯಕ ದಾಸೋಹ. ವೀರಶೈವರೆಲ್ಲರೂ ಸಮಾನರು. ಆಡಂಬರದ ಉಡುಗೆ ತೊಡುಗೆ, ಸಮಾರಂಭ ಮೆರವಣಿಗೆ, ವಿರೋಧಿಸಬೇಕು, ಸ್ವಧರ್ಮದಲ್ಲಿ ನಿಷ್ಠೆ ಪರಧರ್ಮಗಳಲ್ಲಿ ಸಹಿಷ್ಣುತೆ ಬೆಳೆಸಿಕೊಳ್ಳಬೇಕು.

ಮೇಲಿನ ಸೂತ್ರಗಳು ನಮೂನೆಗಳು. ಇದರಂತಹ ಬೇರೆ ಸೂತ್ರಗಳನ್ನು ರಚಿಸಿ, ವೀರಶೈವ ಮಹಾಪರಿಷತ್ತಿನ ಒಪ್ಪಿಗೆ ಪಡೆದು ಆಚರಣೆಗೆ ತರಬಹುದು. ವೀರಶೈವರಿಗೆ ರೇಣುಕಾದಿ ಪಂಚಾಚಾರ್ಯರು ನೀಡಿದ ಕೊಡುಗೆ ಅಮೂಲ್ಯವಾದುದು. ಮಾಡಿದ ಮಾರ್ಗದರ್ಶನ ಅನುಪಮವಾದುದು. ವೀರಶೈವ ಧರ್ಮವನ್ನು ಉಳಿಸುವುದರಲ್ಲಿ ಮತ್ತು ಬೆಳೆಸುವುದರಲ್ಲಿ ಇವರು ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ಇಂದೂ ಕೂಡ ಅವರ ಪರಂಪರೆಯ ಪೂಜ್ಯ ಶಿವಾಚಾರ್ಯರು ಅನುಕರಣೀಯ ಕರ್ಮಗಳನ್ನು ಮಾಡುತ್ತಲಿದ್ದಾರೆ. ಬಸವ ಕ್ರಾಂತಿಯ ನಂತರ ವೀರಶೈವರಿಗೆ ಒದಗಿದ್ದ ಮಹಾವಿಪತ್ತಿ ನಲ್ಲಿ ಅವರನ್ನು ರಕ್ಷಿಸಿದ ಕೀರ್ತಿ ರುದ್ರಮುನಿ ಮೊದಲಾದ ಶಿವಾಚಾರ್ಯರಿಗೆ ಸಲ್ಲುತ್ತದೆ. ಜನಸಾಮಾನ್ಯರ ಮಾನಸದಲ್ಲಿ ಅಚ್ಚಳಿಯದೆ ಪಂಚಾಚಾರ್ಯರ ಚಿತ್ರಗಳಿವೆ. ಕೇದಾರದಿಂದ ಕನ್ಯಾಕುಮಾರಿಯವರೆಗೆ ಇವರ ಪ್ರಭಾವ–ಕೀರ್ತಿ ಇದೆ. ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಇವರ ವರ್ಚಸ್ಸು ಹೆಚ್ಚಾಗಿದೆ.

ಬಸವಾದಿ ಪ್ರಮಥರು ವೀರಶೈವ ಧರ್ಮ ಸಿದ್ಧಾಂತಗಳಲ್ಲಿ ಸುಧಾರಣೆಯನ್ನು ತಂದರು. ಷಟ್‌ಸ್ಥಲ ಬ್ರಹ್ಮಿ ಚೆನ್ನಬಸವಣ್ಣ ಶಿವಾಗಮೋಕ್ತ ವೀರಶೈವ ಧರ್ಮತತ್ವಗಳಲ್ಲಿ ಅಡಕವಾಗಿದ್ದ ವೈದಿಕ ಕೊಳೆಯನ್ನು ತೊಳೆದು, ಅವುಗಳಿಗೆ ಹೊಸ ಕಳೆಯನ್ನು ನೀಡಿದ. ಷಟ್‌ಸ್ಥಲ ಸಿದ್ಧಾಂತವು ವಿಶ್ವ ಸಿದ್ಧಾಂತವಾಗುವಂತೆ ಅದನ್ನು ಮಾರ್ಪಡಿಸಿದ ಶ್ರೇಯಸ್ಸು ಆತನಿಗೆ ಸಲ್ಲುತ್ತದೆ. ವೀರಶೈವ ತತ್ವಗಳಾದ ಅಷ್ಟಾವರಣಗಳು, ಪಂಚಾಚಾರಗಳು ಮತ್ತು ಷಟ್‌ಸ್ಥಲಗಳ ಮಹಾದ್ವಾರಗಳನ್ನು ಜನಸಾಮಾನ್ಯರಿಗೂ ತೆರೆದ. ವ್ಯಷ್ಟಿ ಸಮಷ್ಟಿಗಳ ಹಿತವನ್ನು ಏಕಕಾಲದಲ್ಲಿಯೇ ಸಾಧಿಸಬಲ್ಲ ಅಮೂಲ್ಯ ಸೂತ್ರಗಳನ್ನು ಸೃಷ್ಟಿಸಿದ. ಸಂಸಾರಿಗಳು ಕೂಡ ಶರಣರಾದರು. ಅಂತ್ಯಜರು ಪೂಜ್ಯರಾದರು. ಅದೊಂದು ಅಭೂತಪೂರ್ವ ವೈಚಾರಿಕ ಕ್ರಾಂತಿ.

ವೀರಶೈವರು ಇಂದು ವೈಯುಕ್ತಿಕ ಪ್ರತಿಷ್ಠೆ; ಸ್ಥಾನಮಾನಗಳಿಗೆ ಅಂಟಿಕೊಳ್ಳದೆ, ಪಂಚಪೀಠಾಧಿಪತಿಗಳು ಮತ್ತು ಭಕ್ತರು ಹಾಗೂ ವಿರಕ್ತ ಮಠಾಧೀಶರು ಅವರ ಅನುಯಾಯಿಗಳು ಮುಂದೆ ಬರಬೇಕು. ವೀರಶೈವ(ಲಿಂಗಾಯತ) ಸಮಾಜದ ಹಿತದೃಷ್ಟಿಯಿಂದ ತಮ್ಮ ಭಿನ್ನಾಭಿಪ್ರಾಯಗಳನ್ನು ತೊರೆಯ ಬೇಕು. ಪರಸ್ಪರ ಬೆರೆಯಬೇಕು. ಸ್ವಯಂ ಪ್ರೇರಣೆಯಿಂದ ಒಂದೆಡೆ ಸೇರಿ ಮುಕ್ತ ಚಿಂತನೆ ನಡೆಸಿ, ವೀರಶೈವರಿಗೆ (ಲಿಂಗಾಯಿತರಿಗೆ) ಮಾರ್ಗದರ್ಶನ ಮಾಡಬೇಕು. ರೇಣುಕಾದಿ ಆಚಾರ್ಯರು ಮತ್ತು ಬಸವಾದಿ ಶರಣರು ವೀರಶೈವರಿಗೆ ಪೂಜ್ಯರು. ಪ್ರಾತಃ ಸ್ಮರಣೀಯರು. ಅವರು ಪರಶಿವನ ಆರಾಧಕರು, ಆಜ್ಞಾಧಾರಕರು ಮತ್ತು ಶಿವಗಣಾಧೀಶ್ವರರು, ಪರಶಿವನೊರ್ಬನೇ ಅಗ್ರ ಪೂಜಾರ್ಹ, ಆರಾಧ್ಯದೇವರು, ಏಕಮೇವಾದ್ವಿತೀಯ, ಭಕ್ತರಕ್ಷಕ. ವೀರಶೈವರ ಮನೆ ಮನಗಳಲ್ಲಿ ಪರಶಿವನೇ ರಾರಾಜಿಸಬೇಕು. ಆತನ ಚುಳುಕಾದ ಇಷ್ಟಲಿಂಗದ ಧಾರಣೆ ಹಾಗೂ ಆರಾಧನೆ ನಿತ್ಯವೂ ನಡೆಯಬೇಕು. ರೇಣುಕಾದಿ ಆಚಾರ್ಯ ಮತ್ತು ಬಸವಾದಿ ಪ್ರಮಥರ ಜಯಂತ್ಯುಂತ್ಸವಗಳನ್ನು ಆಚರಿಸಿ ಅವರು ವೀರಶೈವರಿಗೆ ಮಾಡಿದ ಮಹದುಪಕಾರವನ್ನು ಸ್ಮರಿಸಿ ಅವರಿಗೆ ನಮ್ರ ನಮನಗಳನ್ನು ಸಲ್ಲಿಸಬೇಕು.

ಇಂದಿನ ವೀರಶೈವರ ದುಃಸ್ಥಿತಿಯನ್ನು ಕಂಡು ಕೊರಗಿ ಮರುಗಿದ ನನಗೆ ತತ್‌ಕ್ಷಣ ಹೊಳೆದ ಮೇಲಿನ ಕೆಲವು ಸಲಹೆ ಸೂಚನೆಗಳನ್ನು ಲೇಖನ ರೂಪದಲ್ಲಿ ಮಂಡಿಸಿರುವೆ. ಇಲ್ಲಿ ಪ್ರತಿಯೊಂದು ಅಂಶವನ್ನು ನಿರ್ಮಲ ಮನಸ್ಸಿನಿಂದ ಪರಿಶೀಲಿಸಿರುವೆ. ಇವುಗಳಲ್ಲಿರುವ ಒಳಿತನ್ನು ಮಾತ್ರ ಸ್ವೀಕರಿಸಬೇಕೆಂದು ಕೋರುತ್ತೇನೆ. ಇವು ಅವ್ಯವಹಾರಿಕ ಎಂದು ಮೇಲ್ನೋಟಕ್ಕೆ ಕಾಣಬಹುದು. ವೀರಶೈವರ ಇಚ್ಛಾಶಕ್ತಿ ಹಾಗು ಕ್ರಿಯಾಶಕ್ತಿ ಜಾಗ್ರತಗೊಂಡು ಅವರು ಕಾರ್ಯಪ್ರವೃತ್ತ ವಾದರೆ ಇವುಗಳನ್ನು ಕಾರ್ಯರೂಪಕ್ಕೆ ತರಬಹುದಾಗಿದೆ.

ಪೂಜ್ಯ ಮಠಾಧೀಶರೂ, ವೀರಶೈವ ಮುಖಂಡರೂ, ವೀರಶೈವ ಹಿತೈಷಿಗಳೂ. ಮುಖ್ಯವಾಗಿ ವೀರಶೈವ ಯುವಕ ಯುವತಿಯರು ವೀರಶೈವರನ್ನು ಒಂದುಗೂಡಿಸುವ ಮಹತ್ವದ ಮಣಿಹದಲ್ಲಿ ತ್ರಿಕರಣ ಪೂರ್ವಕವಾಗಿ ಭಾಗ ವಹಿಸುವರೆಂದು ನಾನು ಆಶಿಸುವೆ. ಪರಶಿವನು ಅವರಿಗೆ ಧೈರ್ಯಸಾಹಸಗಳನ್ನು ದಯಪಾಲಿಸಲೆಂದು ಹೃದಯಾರೆ ಹಾರೈಸುವೆ.







## ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರಿಗೆ ಅಭಿನಂದನಾ ಸಮಾರಂಭ

ಶ್ರೀಮಠದ ಹಳೆಯ ವಿದ್ಯಾರ್ಥಿ, ಸಮನ್ವಯ ಕವಿ, ವಿಮರ್ಶಕ ಡಾ॥ ಜಿ.ಎಸ್. ಶಿವರುದ್ರಪ್ಪನವರಿಗೆ ರಾಷ್ಟ್ರಕವಿ ಪ್ರಶಸ್ತಿ ಪುರಸ್ಕಾರದ ಶುಭಸಂದರ್ಭದಲ್ಲಿ ಡಿಸೆಂಬರ್ ೧೭ರಂದು ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘ ಹೃದಯಸ್ಪರ್ಶಿ ಅಭಿನಂದನಾ ಸಮಾರಂಭ ಏರ್ಪಡಿಸಲಾಗಿತ್ತು. ಈ ಅಭೂತಪೂರ್ವ ಸಮಾರಂಭದ ಅಧ್ಯಕ್ಷತೆಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು ನಾಡೋಜ ಪ್ರಶಸ್ತಿ ಪುರಸ್ಕೃತರೂ ಆದ ಶ್ರೀ ಜಿ. ನಾರಾಯಣ ಅವರು ವಹಿಸಿದ್ದರು.

ಕನ್ನದ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು, ಹಿರಿಯ ಕವಿ, ವಿಮರ್ಶಕ ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ ನವರು ತಮ್ಮ ಅಭಿನಂದನಾ ನುಡಿಗಳಲ್ಲಿ, ತಡವಾದರೂ ಸರ್ಕಾರ ಒಬ್ಬ ಸಮರ್ಥ ವ್ಯಕ್ತಿಗೆ ರಾಷ್ಟ್ರಕವಿ ಪ್ರಶಸ್ತಿಯನ್ನು ನೀಡಿ ತಾವೇ ಗೌರವಿಸಿಕೊಂಡಿದೆ. ಸರ್ಕಾರಕ್ಕೆ ಅಭಿನಂದನೆ ಸಲ್ಲಿಸುವುದರ ಮೂಲಕ ತಮ್ಮ ಮಾತುಗಳನ್ನು ಆರಂಭಿಸಿದ ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯನವರು, ಡಾ॥ ಜಿ.ಎಸ್. ಶಿವರುದ್ರಪ್ಪನವರು ಒಬ್ಬ ಪ್ರತಿಭಾವಂತ ವಿದ್ಯಾರ್ಥಿ ಪ್ರತಿಭಾವಂತ ಅಧ್ಯಾಪಕ. ಶ್ರೇಷ್ಠ ಅಧ್ಯಾಪಕರಲ್ಲಿ ಶ್ರೇಷ್ಠರಾಗಿ ಬೆಳೆದರು. ಜನಕ್ಕೆ ಹತ್ತಿರವಾದ ಕವಿತೆಗಳನ್ನು ಬರೆದರು. ಅವರ ಕವಿತೆಗಳಲ್ಲಿ ವಿಶೇಷತೆಗಳನ್ನು ಹುಡುಕಬಹುದು. ಅವರೊಬ್ಬ ಮಾನವ ಸಂಬಂಧಗಳನ್ನು ಕುರಿತು ಹಾಡುವ ಕವಿಯಾಗಿ ಕಾವ್ಯಾಸಕ್ತರ ಹೃದಯಮಂದಿರದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ ಎಂದು ಪ್ರಶಂಸಿಸಿದರು.

ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಅಭಿನಂದನಾ ಪತ್ರವನ್ನು ಓದಿ ಡಾ॥ ಜಿ.ಎಸ್.ಎಸ್ ಅವರಿಗೆ ಅರ್ಪಿಸಿದರು. ಪರಮಪೂಜ್ಯ ಶ್ರೀ ಶ್ರೀಗಳವರು ಶಾಲು ಹೊದಿಸಿ, ಫಲತಾಂಬೂಲ ನೀಡಿ ಆಶೀರ್ವದಿಸಿದರು. ಸಮಾರಂಭ ದಲ್ಲಿ ಶ್ರೀಮತಿ ರುದ್ರಾಣಿ ಶಿವರುದ್ರಪ್ಪನವರು ಉಪಸ್ಥಿತರಿದ್ದರು. ಅವರನ್ನು ಶ್ರೀಗಳವರು ಆಶೀರ್ವದಿಸಿದರು. ನಂತರ ತುಮಕೂರು ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು ಲೇಖಕಿಯರ ಪರಿಷತ್ತು, ಶ್ರೀಮತಿ ಎಂ.ಸಿ. ಲಲಿತ, ಬಾ.ಹ. ರಮಾಕುಮಾರಿ ತಂಡದವರು ಸೇರಿದಂತೆ ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಗಳು ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರನ್ನು ಹೃತ್ಪೂರ್ವಕವಾಗಿ ಅಭಿನಂದಿಸಿ ಶುಭ ಕೋರಿದರು. ಅಭಿನಂದನೆ ಸ್ವೀಕರಿಸಿ ಮಾತನಾಡಿದ ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರು ಇಂದು ನಡೆಯುತ್ತಿ ರುವುದು ಅಭಿನಂದನೆ ಯಲ್ಲ, ಪೂಜ್ಯ ಶ್ರೀ ಶ್ರೀಗಳವರ ಮೂಲಕ ನನಗೆ ದೊರೆತಿರುವ ಆಶೀರ್ವಾದ ಎಂದು ಭಾವಿಸಿದ್ದೇನೆ ಎಂದು ವಿನಮ್ರತೆಯಿಂದ ತಿಳಿಸಿದರು. ಶ್ರೀಮಠದಲ್ಲಿ ಮೂರು ವರ್ಷಗಳ ವಿದ್ಯಾರ್ಥಿಯಾಗಿದ್ದ ಸಂದರ್ಭದ ನೆನಪಿನ ಬುತ್ತಿಯನ್ನು ಉಣಬಡಿಸುತ್ತಾ, ಬಾಲ್ಯ ಜೀವನದ ಕೆಲವು ಘಟನೆಗಳನ್ನು ಮೆಲುಕು ಹಾಕಿದರು. ನಾನು ಕವನ ಬರೆಯಲು ಪ್ರಾರಂಭಿಸಿದ್ದು ಶ್ರೀಮಠದಲ್ಲಿ. ಕವಿತೆಗೆ ಸ್ಫೂರ್ತಿ ನೀಡಿದ ತಾಣ ಶ್ರೀ ಸಿದ್ಧಗಂಗಾ ಕ್ಷೇತ್ರ, ಮೊದಲ ಕವನ ಜೀವನದಲ್ಲಿ ಪ್ರಕಟವಾಗಿದ್ದು ಸಿದ್ಧಗಂಗೆಯಲ್ಲಿದ್ದಾಗ ಎಂದು ಭಾವುಕರಾಗಿ ಹೇಳಿದರು. ತಾವು 1975ರಲ್ಲಿ ಪೂಜ್ಯ ಶ್ರೀ ಶ್ರೀಗಳವರನ್ನು ಕುರಿತು ಬರೆದ 'ಹರನ ಕರುಣೋದಯದಿಂದ' ಕವನ ವಾಚಿಸಿದರು.

ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಡಾ॥ ಜಿ.ಎಸ್. ಶಿವರುದ್ರಪ್ಪನವರು ಶ್ರೀಮಠದ ಹಳೆಯ ವಿದ್ಯಾರ್ಥಿಯಾಗಿ, ತಮ್ಮ ಅಸಾಧಾರಣ ಸಾಧನೆಯ ಮೂಲಕ ಮಠದ ಕೀರ್ತಿಯನ್ನು ದಿಗಂತಕ್ಕೆ ಏರಿಸಿದ್ದಾರೆ. ಅವರ ಒಂದೊಂದು ಕವಿತೆಯಲ್ಲೂ ನಮ್ಮನ್ನು ಎಚ್ಚರಿಸುವ ಧ್ವನಿಯಿದೆ ಎಂದು ಅಭಿಪ್ರಾಯ ಪಟ್ಟರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಜಿ. ನಾರಾಯಣ ಅವರು ಮಾತನಾಡಿ 'ಸುವರ್ಣ ಕರ್ನಾಟಕ'ವನ್ನು ಆಚರಿಸುವ ಸಂದರ್ಭದಲ್ಲಿ ಕವಿಗಳ ಕನಸು ನನಸಾಗಿಲ್ಲ. ಕನ್ನಡ ಭಾಷೆಗೆ ಇರಬೇಕಾದ ಸ್ಥಾನ ದೊರೆತಿಲ್ಲ ಎಂದು ವಿಷಾದ ವ್ಯಕ್ತ ಪಡಿಸಿದರು. ಕನ್ನಡ ಸ್ಥಿತಿ ಬೇರೆ ಭಾಷೆಗಳ ಪ್ರಭಾವದಿಂದ ಹಿಂದಕ್ಕೆ ಸರಿಯುತ್ತಿದೆ ಎಂದು ಕಳವಳವನ್ನು ವ್ಯಕ್ತಪಡಿಸಿದರು. ಸರ್ಕಾರ ಈ ಬಗ್ಗೆ ಗಂಭೀರವಾಗಿ ಚಿಂತನೆ ಮಾಡಿ ಗಮನ ಕೊಡದಿದ್ದರೆ ಇಲ್ಲಿ ಕನ್ನಡಿಗರು ಅಲ್ಪಸಂಖ್ಯಾತರಾಗಬೇಕಾದ ಪರಿಸ್ಥಿತಿ ಉಂಟಾಗುತ್ತದೆ ಎಂದು ಎಚ್ಚರಿಸಿದರು.

ಸುವರ್ಣ ಕರ್ನಾಟಕದ ಶುಭಸಂದರ್ಭದಲ್ಲಿ ಸರ್ಕಾರ ಉತ್ತಮವಾದ ನಿರ್ಧಾರವನ್ನು ತೆಗೆದುಕೊಂಡು ಡಾ॥ ಜಿ.ಎಸ್. ಶಿವರುದ್ರಪ್ಪನವರಿಗೆ ರಾಷ್ಟ್ರಕವಿ ಪ್ರಶಸ್ತಿಯನ್ನು ನೀಡಿರುವುದು ತುಂಬಾ ಸಂತೋಷವನ್ನುಂಟುಮಾಡಿದೆ. ರಾಷ್ಟ್ರಕವಿ ಪ್ರಶಸ್ತಿ ಎಲ್ಲ ಪ್ರಶಸ್ತಿ, ಅಧಿಕಾರಗಳಿಗಿಂತ ದೊಡ್ಡದು ಎಂದು ತಿಳಿಸಿದ ಶ್ರೀ ನಾರಾಯಣ ಅವರು ಡಾ॥ ಜಿ.ಎಸ್.ಎಸ್ ಅವರ ಸರಳತೆ, ಸಜ್ಜನಿಕೆಯನ್ನು ಮುಕ್ತ ಕಂಠದಿಂದ ಪ್ರಶಂಸಿಸಿದರು. ಪೂಜ್ಯ ಶ್ರೀಗಳವರ ಆಶೀರ್ವಾದವೇ ಡಾ॥ ಜಿ.ಎಸ್.ಎಸ್ ರಾಷ್ಟ್ರಕವಿ ಪ್ರಶಸ್ತಿ ಬಂದಿದೆ ಎಂದರು. ಜಾತಿ ಭೇದವಿಲ್ಲದೆ ಎಲ್ಲರಿಗೂ ಮುಕ್ತ

ಅವಕಾಶವನ್ನು ನೀಡಿ ೮೦೦೦ ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸುತ್ತಿರುವ ಪರಮಪೂಜ್ಯ ಶ್ರೀಗಳವರ ಅನನ್ಯ ಸೇವೆ ಮಹತ್ತರವಾದುದು ಎಂದು ಶ್ಲಾಘಿಸಿದರು. ಪರಮಪೂಜ್ಯ ಶ್ರೀಗಳವರನ್ನು ಕುರಿತು ಡಾ|| ಜಿ.ಎಸ್. ಶಿವರುದ್ರಪ್ಪನವರು ಪುಸ್ತಕ ಬರೆಯಬೇಕು ಎಂದು ಹೇಳಿದರು.

ಪರಮಪೂಜ್ಯ ಶ್ರೀಗಳವರು ಆಶೀರ್ವಚನ ನೀಡುತ್ತಾ ಶ್ರೀ ಜಿ. ನಾರಾಯಣರ ಮಾತುಗಳನ್ನು ಪ್ರಸ್ತಾಪಿಸಿ ನಾಡು ನುಡಿಯ ಬಗ್ಗೆ ಅಭಿಮಾನ ಬೆಳೆಸಿಕೊಳ್ಳಬೇಕಾಗಿದೆ ಎಂದರು. ಡಾ|| ಜಿ.ಎಸ್. ಶಿವರುದ್ರಪ್ಪನವರಂತೆ ಸಾಧನೆಯ ಶಿಖರವನ್ನೇರಿ ಶ್ರೀಮಠಕ್ಕೆ ಕೀರ್ತಿ ತರಬೇಕು, ಆ ನಿಟ್ಟಿನಲ್ಲಿ ಶಿಕ್ಷಕರು ವಿದ್ಯಾರ್ಥಿಗಳಿಗೆ ತರಬೇತಿ ನೀಡಬೇಕು ಎಂದು ತಿಳಿಸಿದರು.

ಹಳೆಯ ವಿದ್ಯಾರ್ಥಿಗಳು ಹಾಗು ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿ ಡಾ|| ಎಂ.ಎಸ್ ಚೆನ್ನಬಸಪ್ಪನವರು ಸ್ವಾಗತಿಸಿದರು. ವಿದ್ವಾನ್ ಎಂ. ಶಿವಕುಮಾರಸ್ವಾಮಿ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀ ಜಿ. ಕುಮಾರಸ್ವಾಮಿ ಹಾಗೂ ಡಿ.ಇಡಿ. ತರಬೇತಿ ಕೇಂದ್ರದ ವಿದ್ಯಾರ್ಥಿಗಳು ಡಾ|| ಜಿ.ಎಸ್. ಶಿವರುದ್ರಪ್ಪನವರ ಕವನಗಳನ್ನು ಸುಶ್ರಾವ್ಯವಾಗಿ ಹಾಡಿದರು.

## 52ನೇ ವಾರ್ಷಿಕ ಸರ್ವಸದಸ್ಯರ ಮಹಾಧಿವೇಶನ

ಡಿಸೆಂಬರ್ ೧೭ರಂದು ಶ್ರೀಮಠದಲ್ಲಿ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ೫೨ನೆಯ ಸರ್ವಸದಸ್ಯರ ಮಹಾಧಿವೇಶನ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ, ಕಿರಿಯ ಶ್ರೀಗಳವರ ಉಪಸ್ಥಿತಿಯಲ್ಲಿ ನಡೆಯಿತು. ಸಂಘದ ಪ್ರಧಾನ ಕಾರ್ಯದರ್ಶಿ ಡಾ|| ಎಂ.ಎಸ್. ಚನ್ನಬಸಪ್ಪನವರು ಪ್ರಸ್ತಾವಿಕ ನುಡಿಗಳಲ್ಲಿ ಪೂಜ್ಯ ಶ್ರೀಗಳವರ ಶತಮಾನೋತ್ಸವ ಸಿದ್ಧತೆಯನ್ನು ಕುರಿತು ಮಾತನಾಡಿದರು. ಶತಮಾನೋತ್ಸವದ ಶುಭಸಂದರ್ಭದಲ್ಲಿ ಶ್ರೀಮಠದಲ್ಲಿ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತ ಶಾಶ್ವತ ಯೋಜನೆಗಳನ್ನು ಕುರಿತು ಮಾಹಿತಿ ನೀಡಿದರು. ಕಾರ್ಯಕ್ರಮದ ಯಶಸ್ವಿಗೆ ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಅಭಿಮಾನಿಗಳು, ಮುಕ್ತ ಮನಸ್ಸಿನಿಂದ ಸಹಾಯ, ಸಹಕಾರ ನೀಡಬೇಕೆಂದು ಮನವಿ ಮಾಡಿದರು. ಸಹಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ವಾರ್ಷಿಕ ವರದಿಯನ್ನು ನಡೆಸಿಕೊಟ್ಟರು.

ಶತಮಾನೋತ್ಸವದ ಅಂಗವಾಗಿ ಹೊರತರಲು ಉದ್ದೇಶಿಸಿರುವ ಅಭಿನಂದನಾ ಗ್ರಂಥದ ಬಗ್ಗೆ ಹಿರಿಯ ವಿದ್ವಾಂಸರಾದ ಶ್ರೀ ಟಿ.ಆರ್. ಮಹಾದೇವಯ್ಯನವರು ವಿವರ ನೀಡಿದರು. ವಿವಿಧ ವಿಷಯಗಳನ್ನೊಳಗೊಂಡಂತೆ ನೂರು ಪುಸ್ತಕಗಳ ಯೋಜನೆ ಹಾಗೂ ಚಿತ್ರಸಂಪುಟದ ಅಗತ್ಯತೆ ಬಗ್ಗೆ ಸಾಹಿತಿಗಳಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಸಭೆಗೆ ವಿವರ ನೀಡಿ ನೂರು ಪುಸ್ತಕಗಳನ್ನು ಹೊರತರಲು ಪ್ರಾಯೋಜಿತರಾಗಲು ಮನವಿ ಮಾಡಿದರು. ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಹಳೆಯ ವಿದ್ಯಾರ್ಥಿಗಳು ಶ್ರೀಮಠದಲ್ಲಿ ದ್ದಾಗ ಅವರ ಅನುಭವಗಳನ್ನು ಲೇಖನ ರೂಪದಲ್ಲಿ ಬರೆದು ಕಳುಹಿಸಿಕೊಡುವಂತೆ ಮನವಿ ಮಾಡಿದರು.

ಪೂಜ್ಯ ಶ್ರೀಗಳವರು ಆಶೀರ್ವಚನ ನೀಡುತ್ತಾ, ಹಿಂದೆ ಮಠದ ಪರಿಸ್ಥಿತಿಯನ್ನು ವಿವರಿಸಿ ವಿದ್ಯಾರ್ಥಿಗಳನ್ನು ಪೋಷಿಸಲು ಪಟ್ಟ ಕಷ್ಟವನ್ನು ನೆನಪಿಸಿಕೊಂಡರು. ಸಮಾಜದಲ್ಲಿ ತಾಂಡವವಾಡುತ್ತಿರುವ ಭ್ರಷ್ಟಾಚಾರದ ಬಗ್ಗೆ ಪ್ರಸ್ತಾವಿಸಿ ಪ್ರಾಮಾಣಿಕವಾಗಿ ಕೆಲಸ ಮಾಡಬೇಕಾದ ಪ್ರವೃತ್ತಿಯನ್ನು ಬೆಳೆಸಿಕೊಳ್ಳಲು ಕರೆ ನೀಡಿದರು. ತಮ್ಮ ಅರಿವಿನ ಆಳವನ್ನು ಹೆಚ್ಚಿಸಿಕೊಳ್ಳಲು ಗ್ರಂಥಗಳನ್ನು ಓದಬೇಕು. ಗ್ರಂಥಾವಲೋಕನ ಜೀವನದ ಅವಿಭಾಜ್ಯ ಅಂಗವಾಗಬೇಕು. ಶಿಕ್ಷಕರು ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸುವಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂದು ಕಿವಿಮಾತು ಹೇಳಿದರು. ಕೊನೆಯಲ್ಲಿ ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ಶರಣು ಸಮರ್ಪಣೆ ಮಾಡಿದರು. ಶ್ರೀ ಕೆ.ಎಚ್. ಶಿವರುದ್ರಯ್ಯನವರು ಕಾರ್ಯಕ್ರಮ ನಿರೂಪಿಸಿದರು.

ವರದಿ: ಶ್ರೀ ಎಚ್.ಎಸ್. ಸಿದ್ಧಗಂಗಪ್ಪ

## ದತ್ತಿ ಉಪನ್ಯಾಸ

ಶ್ರೀಮಠದಲ್ಲಿ ದಿನಾಂಕ 17-12-2006ರ ಭಾನುವಾರ ಸಂಜೆ ಪ್ರಾರ್ಥನಾ ಸಭೆಯಲ್ಲಿ ಬಸವ ಸಮಿತಿ ವತಿಯಿಂದ ತುಮಕೂರಿನ ಲಿಂ|| ಟಿ.ಹೆಚ್. ಕೆಂಪಹೊನ್ನಯ್ಯ (ಕೆಂಪಣ್ಣ) ಅವರ ಸ್ಮರಣಾರ್ಥ ದತ್ತಿ ಉಪನ್ಯಾಸ ಏರ್ಪಡಿಸ ಲಾಗಿತ್ತು. ಉಪನ್ಯಾಸ ನೀಡಿದ ಪ್ರೊ|| ಜಿ.ಎಸ್. ಸಿದ್ಧಲಿಂಗಯ್ಯ ನವರು ಬಸವಣ್ಣನವರ ಸಮಗ್ರ ಕ್ರಾಂತಿಯನ್ನು ಸರಳ ಹಾಗೂ ಸಂಕ್ಷಿಪ್ತವಾಗಿ ವಿವರಿಸಿದರು.

ಅಸ್ಪೃಶ್ಯತೆ ಎಂಬುದು ಭಾರತೀಯ ಸಮಾಜಕ್ಕೆ ಅಂಟಿದ ಶಾಪ. ಅನೇಕ ಮಹಾತ್ಮರು ಇದರ ವಿರುದ್ಧ ಹೋರಾಡಿದ್ದಾರೆ. ಅವರಲ್ಲಿ ಪ್ರಮುಖರು ಬಸವೇಶ್ವರರು. ಅವರ ಕಾಲದಲ್ಲಿ ಅಸ್ಪೃಶ್ಯರ ಪರಿಸ್ಥಿತಿ ಅತ್ಯಂತ ಹೀನಾಯವಾಗಿತ್ತು. ಸವರ್ಣಿಯರು ವಾಸ ಮಾಡುವ ಕೇರಿಗಳಿಗೆ ಅವರ ಪ್ರವೇಶವಿರಲಿಲ್ಲ. ಬಂದರು ಒಂದು ಕೋಲಿಗೆ ಗೆಜ್ಜೆ ಕಟ್ಟಿಕೊಂಡು ಶಬ್ಧ ಮಾಡುತ್ತಾ 'ಸಾಂಬೋಳಿ' ಎಂದು ಕೂಗುತ್ತಾ ಬರಬೇಕು. ಅವರ ಹೆಜ್ಜೆಯ ಗುರುತು ಭೂಮಿಯ ಮೇಲೆ ಉಳಿಯು ವಂತಿರಲಿಲ್ಲ. ಅದಕ್ಕಾಗಿ ಬೆನ್ನ ಹಿಂದೆ ಒಂದು ಬರಲನ್ನು ಕಟ್ಟಿಕೊಂಡಿರಬೇಕಾಗಿತ್ತು. ಉಗುಳನ್ನು ಉಗಿಯು ವಂತಿರಲಿಲ್ಲ. ಅದಕ್ಕಾಗಿ ಬಾಯಿಗೆ ಒಂದು ಚೀಲಕಟ್ಟಿ ಕೊಳ್ಳಬೇಕಾಗಿತ್ತು. ಸವರ್ಣೀಯರು ತಿಂದು ಬಿಸಾಕಿದ ಎಂಜಲನ್ನು ತಿನ್ನಬೇಕಾಗಿತ್ತು. ಹೀಗೆ ಅವರ ಬದುಕು ಅತ್ಯಂತ ಶೋಚನೀಯ ವಾಗಿತ್ತು. ಈ ದೇಶದಲ್ಲಿ ಅನೇಕ ಜನ ಆಚಾರ್ಯರುಗಳು, ಸಮಾಜ ಸುಧಾರಕರು ಬಂದು ಹೋದರು ಅವರ ಸ್ಥಿತಿ ಬದಲಾಗಲಿಲ್ಲ. ಆದರೆ ಮೊದಲ ಬಾರಿಗೆ ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ತೊಲಗಿಸ ಬೇಕೆಂದು ಹೋರಾಡಿದ ಮಹಾನುಭಾವ ಬಸವೇಶ್ವರರು.

'ರಾಮರಾಜ್ಯ ಬಂದರು ರಾಗಿ ಬೀಸುವುದು ತಪ್ಪಲಿಲ್ಲ' ಎನ್ನುವ ಗಾದೆ ಮಾತೊಂದಿದೆ. ಆದರೆ ಬಸವಣ್ಣನ ಕಾಲದಲ್ಲಿ ರಾಜರು ರಾಗಿ ಬೀಸಲು ಪ್ರಾರಂಭಿಸಿದರು. ಕಾಶ್ಮೀರದ ಮಹಾರಾಜ ಮಹದೇವ ಭೂಪಾಲ ಪತ್ನೀ ಸಮೇತನಾಗಿ ಕಲ್ಯಾಣಕ್ಕೆ ಬಂದು ಕಟ್ಟಿಗೆ ಕಾಯಕಕ್ಕೆ ತನ್ನನ್ನು ಅರ್ಪಿಸಿಕೊಂಡರು. ಹೀಗೆ ಭಾರತದ ಮೂಲೆ ಮೂಲೆ ಗಳಿಂದ ಕಲ್ಯಾಣಕ್ಕೆ ಬಂದು ಬಸವಣ್ಣನೆಂಬ ಆ ಜ್ಯೋತಿಯ ಬೆಳಕಿನಲ್ಲಿ ತಾವು ಬೆಳಗಿ ಪಾವನರಾದರು.

ಏಸು ತಾನು ದೇವತನಯ ಎಂದು ಹೇಳಿಕೊಂಡರೆ ಪೈಗಂಬರ್, ಕುರಾನ್ ದೇವರ ವಾಣಿ, ನಾನು ಬರುವುದಕ್ಕೆ ಮೊದಲೇ ಪ್ರವಾದಿಗಳು ಬಂದು ಹೋಗಿದ್ದಾರೆ. ನಾನೇ ಕೊನೆಯ ಎಂದು ಹೇಳಿಕೊಂಡರು. ಆದರೆ ಬಸವಣ್ಣನವರು 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದರು. ಮತ್ತೊಂದೆಡೆ ನಾನೊಬ್ಬನೆ ಭಕ್ತ, ಉಳಿದವರೆಲ್ಲ ಕೂಡಲ ಸಂಗಮನಾಥನ ಸಾಕ್ಷತ್ ಸ್ವರೂಪರು ಎನ್ನುತ್ತಾರೆ. ಅಂತಹ ವಿನಯ ಸಂಪನ್ನತೆ ಬಸವಣ್ಣನವರದು. ಮರ್ತ್ಯಲೋಕವನ್ನು ಕರ್ತಾರನ ಕಮ್ಮಟ ಮಾಡಿ 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲು ವರಯ್ಯ' 'ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ' ಎಂದು ಹೇಳಿ ಭೂಲೋಕವನ್ನೇ ಸ್ವರ್ಗಲೋಕವನ್ನಾಗಿ ಅರಳಿಸಿದರು, ಕೈಲಾಸವನ್ನಾಗಿ ಮಾಡಿದರು.

ಶರಣರು ಕಾಯಕಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟವರು. ಮಾದಾರ ಧೂಳಯ್ಯನನ್ನು ಪರೀಕ್ಷಿಸಲು ಶಿವ ಬಂದು ಆತನ ಮುಂದೆ ನಿಂತರು. ಆತನ ಕಡೆಗೆ ನೋಡುವುದೇ ಇಲ್ಲ. ಆಗ ಶಿವ ಆತ ಹೊಲೆಯುತ್ತಿದ್ದ ಚಪ್ಪಲಿಯ ಅಟ್ಟೆಯಲ್ಲಿ ಕಾಣಿಸಿಕೊಳ್ಳುತ್ತಾನೆ. ಆಗಲೂ ಅತ್ತ ನೋಡದೇ ಇದ್ದಾಗ ಆತ ಹೊಲೆಯುತ್ತಿದ್ದ ಸೂಜಿಯ ಮೊನೆಯಲ್ಲಿ ಶಿವ ಗೋಚರಿಸಿದನಂತೆ. ಆಗ ಮಾದಾರ ಧೂಳಯ್ಯ ಶಿವನನ್ನು ಕುರಿತು ಈ ದೇಹವೆಂಬ ಚೀಲವ ಹೊತ್ತು ತಿರುಗುತ್ತಾ ನನ್ನ ಕಾಯಕ ಮಾಡುತ್ತಿದ್ದೇನೆ ಭಂಗ ತರಬೇಡ ಎಂದು ಬೇಡಿದ. ಆಗ ಶಿವ ನಿನ್ನ ಕಾಯಕಕ್ಕೆ ಮೆಚ್ಚಿದ್ದೇನೆ ಕೈಲಾಸಕ್ಕೆ ಬಾ ನನ್ನೊಡನೆ ಎಂದು ಕರೆಯುತ್ತಾನೆ. ಆಗ ಧೂಳಯ್ಯ ಅಲ್ಲಿ ನನಗೇನಿದೆ ಕಾಯಕ, ಉಂಡುಂಡು ತಿಂದು ತೇಗಿ ಮೈಬೆಳೆಸುವ ನಿನ್ನ ಭಕ್ತರು ಈ ಲೋಕದಲ್ಲಿದ್ದಾರೆ. ಅವರನ್ನು ಕರೆದುಕೊಂಡು ಹೋಗು. ನಾನು ಲೋಕವನ್ನೇ ಕೈಲಾಸ ಮಾಡಿಕೊಳ್ಳುತ್ತೇನೆ ಎಂದನಂತೆ. ಹೀಗೆ ಆಯ್ದಕ್ಕಿ ಲಕ್ಕಮ್ಮನು ತನ್ನ ಗಂಡ ಮಾರಯ್ಯ ಕಾಯಕ ಮರೆತು ಅನುಭವ ಮಂಟಪದಲ್ಲಿ ಕುಳಿತಿದ್ದಾಗ ಹೋಗಿ ಎಚ್ಚರಿಸುತ್ತಾಳೆ. ಆಗ ಮಾರಯ್ಯ ಬೇಗ ಬೇಗ ಹೋಗಿ ಅಲ್ಲಿ ಸುರಿದಿದ್ದ ಅಕ್ಕಿಯನ್ನು ತುಂಬಿ ತಂದಾಗ, ತಾಯಿ ಲಕ್ಕವ್ವ ಇದು ಕಾಯಕದಿಂದ ಬಂದಿದ್ದಲ್ಲ. ಇದರ ತುಂಬ ಹೊಲಸು ತುಂಬಿದೆ ಎಂದು ಗಂಡನನ್ನು ಎಚ್ಚರಿಸುತ್ತಾಳೆ. ಲಕ್ಕಮ್ಮನಂತಹ ಸಾಧ್ವೀಮಣಿಯರು ಇದ್ದಿದ್ದರೆ ಈ ದೇಶದಲ್ಲಿ ಭ್ರಷ್ಟಾಚಾರವೆ ಇರುತ್ತಿರಲಿಲ್ಲ. ಆತನ ಮಾತುಗಳಿಗೆ ಮಂತ್ರ ಶಕ್ತಿ ಇತ್ತು. ಮರುಳ ಶಂಕರದೇವನಂತ ಗುಪ್ತ ಭಕ್ತ ಅಫ್ಘಾನಿಸ್ಥಾನದಿಂದ ಕಲ್ಯಾಣಕ್ಕೆ ಬಂದವರು, ಪ್ರಭುದೇವರಂತ ಮಹಾಜ್ಞಾನಿಯು ಕೂಡ ಬಸವಣ್ಣನ ಕಾರ್ಯ ಕ್ಷೇತ್ರವ ಕಂಡು 'ಎನ್ನ ಬಸವನಾಗಿ ಹುಟ್ಟಿಸದೆ ಏಕೆ ಪ್ರಭುವಾಗಿ ಹುಟ್ಟಿಸಿದೆ' ಎನ್ನುತ್ತಾರೆ. ಯುಗದ ಉತ್ಸಾಹ ಬಸವಣ್ಣ ಎಂದು ಕೊಂಡಾಡುತ್ತಾರೆ. ಹೀಗೆ ಎಲ್ಲಾ ಶರಣರ ಕೇಂದ್ರ ಬಿಂದುವಾಗಿ, ಅಸ್ಪೃಶ್ಯತಾ ನಿವಾರಣ ಮತ್ತು ಕಾಯಕ ದಾಸೋಹ ತತ್ವಗಳ ಪ್ರತಿಪಾದಕರಾಗಿ ಬೆಳಗಿದರು ಬಸವಣ್ಣನವರು.

ಅಧ್ಯಕ್ಷತೆ ವಹಿಸಿದ್ದ ಸನ್ಮಾನ್ಯ ಶ್ರೀ ಟಿ.ಕೆ. ನಂಜುಂಡಪ್ಪ ನವರು ದಿ|| ಕೆಂಪಣ್ಣನವರ ಸಾತ್ವಿಕ ಜೀವನ, ಸಾಮಾಜಿಕ ಸೇವೆಯನ್ನು ಸ್ಮರಿಸಿದರು. ಶ್ರೀಯುತರು ಶ್ರೀಮಠದ ಎಲ್ಲಾ ಕೆಲಸ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದು, ಪೂಜ್ಯರ ಅಂತರಂಗದ ಭಕ್ತರಾಗಿದ್ದರು ಎಂದು ಸ್ಮರಿಸಿದರು.

ಪೂಜ್ಯ ಶ್ರೀಗಳವರು ಆಶೀರ್ವಚನ ನೀಡಿ ಮನುಷ್ಯ ಕಾಯಕ ತತ್ವವ ಮರೆತು ಭ್ರಷ್ಟಾಚಾರದಲ್ಲಿ ಮುಳುಗಿದ್ದಾನೆ. ಕಾಯಕದಿಂದ ದೇಹ ಶುದ್ಧವಾಗುತ್ತದೆ, ದೇವಾಲಯ ವಾಗುತ್ತದೆ. ಸ್ವಾತಂತ್ರ್ಯ ಬಂದ ಮೇಲೆ ಸ್ವೇಚ್ಛಾಚಾರ ಜಾಸ್ತಿಯಾಗಿದೆ. ಭೋಗ ಜೀವನಕ್ಕೆ ಮನಸೋತು ತನ್ನ ಬದುಕನ್ನು ನಾಶ ಮಾಡಿಕೊಳ್ಳುತ್ತಿದ್ದಾನೆ. ಬಸವಣ್ಣನವರ ತತ್ವಗಳು ಸಾರ್ವಕಾಲಿಕವಾದವುಗಳು, ಜಗತ್ತಿನ ದಾರ್ಶನಿಕರ ಸಾಲಿನಲ್ಲಿ ಬಸವಣ್ಣನವರು ಬಹಳ ಎತ್ತರದಲ್ಲಿ ನಿಲ್ಲುವ ಶ್ರೇಷ್ಠ ಚಿಂತಕರು ಎಂದು ತಿಳಿಸಿದರು.

ಬಸವ ಸಮಿತಿ ಉಪಾಧ್ಯಕ್ಷರಾದ ಶ್ರೀ ಹೆಚ್.ಎಸ್. ರೇಣುಕ ಪ್ರಸಾದ್‌ರವರು ಪ್ರಾಸ್ತಾವಿಕ ನುಡಿಗಳನ್ನಾಡಿ ಇದು ೪೩೨ನೇ ದತ್ತಿ ಉಪನ್ಯಾಸ, ಬಸವ ಸಮಿತಿ ನಾಲ್ಕು ದಶಕ ಗಳಿಂದ ಭಾರತದಾದ್ಯಂತ ವಿಸ್ತರಿಸಿದೆ. ಬಸವ ಸಂದೇಶವನ್ನು ಏಳು ಭಾಷೆಗಳಲ್ಲಿ ನೂರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸ ಲಾಗಿದೆ. ಇದನ್ನು ಸ್ಥಾಪಿಸಿದ ಬಿ.ಡಿ. ಜತ್ತಿಯವರ ಹೆಸರು ಅಮರ ಎಂದು ತಿಳಿಸಿದರು.

## ಜಿನಸಂತ ವಾಣಿ

ರಾಷ್ಟ್ರಸಂತ ಕ್ರಾಂತಿಕಾರಿ ಮುನಿಶ್ರೀ 108 ತರುಣ ಸಾಗರ್‌ಜೀ ಮಹಾರಾಜ್‌ರವರು ಶ್ರೀಮಠಕ್ಕೆ ಭೇಟಿ ನೀಡಿ ಗುರುದರ್ಶನ ಮಾಡಿ ಮಕ್ಕಳಿಗೆ ಆಶೀರ್ವಚನ ನೀಡಿದರು.

ಜಗತ್ತಿನ 122 ದೇಶಗಳಲ್ಲಿ ಮಹಾವೀರ ತತ್ವಗಳನ್ನು ವಿಶ್ವವ್ಯಾಪಿ ಪ್ರಸಾರ ಮಾಡಿ ಬಂದಿದ್ದೇನೆ, ನನಗೆ ಶಿವಕುಮಾರ ಸ್ವಾಮೀಜಿಯವರನ್ನು, ಇಲ್ಲಿಯ ಮಕ್ಕಳನ್ನು ಹಾಗೆಯೆ ಸಾಮೂಹಿಕ ಪ್ರಾರ್ಥನೆಯನ್ನು ನೋಡಿ ಬಹಳ ಆನಂದ ವಾಗಿದೆ.

'ಶಾಲೆಯೊಂದನ್ನು ತೆರೆದರೆ ಬಂದಿಖಾನೆ ಯೊಂದನ್ನು ಮುಚ್ಚಿದಂತೆ' ಸ್ವಾಮೀಜಿಯವರು ಇಷ್ಟೊಂದು ಸಹಸ್ರ ಸಹಸ್ರ ಮಕ್ಕಳಿಗೆ ಅನ್ನದಾನ ವಿದ್ಯಾದಾನ ಮಾಡು ವುದನ್ನು ನೋಡಿದರೆ ಬಿಹಾರದ ದೊಡ್ಡ ಬಂದಿಖಾನೆ 'ತೀಸ್‌ಹಜಾರಿ' ಜೈಲನ್ನು ಮುಚ್ಚಿದಂತೆ. ಜ್ಞಾನದ ಪ್ರಗತಿಯಿಂದ ಅಪರಾಧಗಳು ಕ್ಷೀಣಿಸುತ್ತವೆ. ವಿದ್ಯಾರ್ಥಿಗಳಿಗೆ ಲೌಕಿಕ ಶಿಕ್ಷಣದ ಜೊತೆಗೆ ಜೀವನವನ್ನು ಎದುರಿಸುವ ದೀಕ್ಷೆಯು ಅಗತ್ಯವಿದೆ. ಈ ದಿಶೆಯಲ್ಲಿ ಸಿದ್ಧಗಂಗಾ ಶ್ರೀಗಳು ಈ ಎರಡು ವಿಚಾರಗಳಲ್ಲಿ ಕಾರ್ಯ ತತ್ಪರರಾಗಿದ್ದಾರೆ, ಅವರ ಉಪದೇಶಾಮೃತ ನಿಮಗೆ ಪ್ರತಿನಿತ್ಯ ಲಭ್ಯವಾಗುತ್ತಿದೆ.



ಪ್ರತಿಯೊಬ್ಬರ ಬದುಕಿನಲ್ಲಿ ಮೂರು ಮಹತ್ವದ ಸಂಗತಿಗಳಿರುತ್ತವೆ. ಬಾಲ್ಯದಲ್ಲಿ ತಾಯಿಯಿಂದ ದೊರೆಯುವ ಸಂಸ್ಕಾರ, ಯೌವ್ವನದಲ್ಲಿ ಮಹಾತ್ಮರ ಉಪದೇಶ, ಮುಪ್ಪಿನಲ್ಲಿ ಪರಮಾತ್ಮನ ಅನುಸಂಧಾನ ಮುಖ್ಯವಾಗುತ್ತವೆ, ಇಲ್ಲಿನ ಮಕ್ಕಳಿಗೆ ಶ್ರೀಗಳು ಮಾತೆ, ಮಹಾತ್ಮ, ಮಹಾದೇವ ಎಲ್ಲವೂ ಹಾಗಿದ್ದಾರೆ. ಸ್ವಾಮೀಜಿಯುವರ ಕಾರ್ಯಕ್ಷೇತ್ರವನ್ನು ಕಂಡು ಹರ್ಷ ವಾಗುತ್ತಿದೆ. ಪೂಜ್ಯರ, ಶೈಕ್ಷಣಿಕ, ಕಾಯಕ, ದಾಸೋಹ ಮತ್ತು ಸಾಮಾಜಿಕ ಮುಂತಾದ ಹಲವು ಸಾಧನೆಗಳು ಭಾರತೀಯ ಇತಿಹಾಸದಲ್ಲಿ ಸುವರ್ಣಾಕ್ಷರದಲ್ಲಿ ಬರೆದಿಡ ಬೇಕಾದ ವಿಚಾರ ಎಂದು ಆನಂದಭರಿತರಾಗಿ ನುಡಿದರು. ಈ ದೇಶ ಭವ್ಯ ಭವಿತವ್ಯವಾಗಿರುವ ವಿದ್ಯಾರ್ಥಿಗಳಾದ ನೀವು ಶೀಲ, ಚಾರಿತ್ರ್ಯ, ಸಂಯಮ ಮುಂತಾದ ಸದ್ಗುಣ ಗಳನ್ನು ಬೆಳೆಸಿಕೊಳ್ಳಬೇಕು ಎಂದು ಆಶೀರ್ವಚನ ನೀಡಿ, ಶ್ರೀಮಠದಲ್ಲಿ ದೊರೆತ ಆತಿಥ್ಯಕ್ಕೆ ಸಂತೃಪ್ತಿ ವ್ಯಕ್ತಪಡಿಸಿ ಅಭಿನಂದನೆ ಅರ್ಪಿಸಿದರು. ಶ್ರೀಮಠದ ಪರವಾಗಿ ಮುನಿಶ್ರೀ ಅವರನ್ನು ಗೌರವಿಸಲಾಯಿತು.

## ಜನಸಂಪರ್ಕ ಸಭೆ

ದಿನಾಂಕ 30-12-2006ರಂದು ಶ್ರೀಮಠದಲ್ಲಿ ತುಮಕೂರು ಜಿಲ್ಲಾಡಳಿತ ಮತ್ತು ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೋಕು ಪಂಚಾಯಿತಿ ವತಿಯಿಂದ ಜನಸಂಪರ್ಕ ಸಭೆಯನ್ನು ಏರ್ಪಡಿಸಲಾಗಿತ್ತು.

ಈ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ



ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ದೀಪ ಬೆಳಗಿಸುವುದರ ಮುಖೇನ ಉದ್ಘಾಟಿಸಿ ಆಶೀರ್ವಚನ ನೀಡುತ್ತಾ, ಭಾರತೀಯ ಸಮಾಜ ತಾತ್ವಿಕ ತಳಹದಿಯ ಮೇಲೆ ರೂಪಿತವಾದ ಸಮಾಜ. ನಮ್ಮ ಹಿರಿಯರು ಎಲ್ಲಾ ಕೆಲಸದಲ್ಲಿಯೂ ಆಧ್ಯಾತ್ಮಿಕತೆಯನ್ನು ಬೆಳೆಸಿಕೊಂಡರು. ಎಲ್ಲಾ ರಂಗದಲ್ಲಿಯೂ ಸ್ವಾವಲಂಬಿಗಳಾಗಿ ಬದುಕು ರೂಪಿಸಿ ಕೊಂಡವರು, ಪರಾವಲಂಬನೆ ಮಾನವ ಜನ್ಮಕ್ಕೆ ಅಪಮಾನ ಕರ ಅಷ್ಟೇ ಅಲ್ಲ ಪಾಪ ಕಾರ್ಯವೆಂದು ಭಾವಿಸಿದ್ದರು. ಪರಸ್ಪರ ಸಹಕಾರ, ಅನ್ಯೋನ್ಯತೆ ಬದುಕಿನ ಸೂತ್ರವಾಗಿತ್ತು. ಆದರೆ ಸ್ವಾತಂತ್ರ್ಯಾನಂತರ ನಮ್ಮಲ್ಲಿ ಸೋಮಾರಿತನ ಜಾಸ್ತಿಯಾಗಿದೆ. ಕಾಯಕ ತತ್ವವನ್ನು ಮರೆತಿದ್ದೇವೆ. ಭೋಗ ಜೀವನಕ್ಕೆ ಮನಸೋತು ಸ್ವೇಚ್ಛಾಚಾರಿಯಾಗಿದ್ದಾನೆ. ಮುಖಂಡತ್ವವು ಇದರಿಂದ ಹೊರತಾಗಿಲ್ಲ. ಪುಣ್ಯಾತ್ಮ ಲಾಲ್ ಬಹದ್ದೂರ ಶಾಸ್ತ್ರಿಯವರು ಐದು ವರ್ಷ ಈ ರಾಷ್ಟ್ರವನ್ನು ಆಳಿದ್ದರೆ ಭಾರತೀಯರ ಇತಿಹಾಸವೇ ಬದಲಾಗುತ್ತಿತ್ತು. ಇಂದಿನ ಕರ್ನಾಟಕ ಸರ್ಕಾರ ಉತ್ತಮ ಕೆಲಸ ಮಾಡುತ್ತಿದೆ. ಕೋಟ್ಯಾಂತರ ರೂಪಾಯಿ ಖರ್ಚಾಗುತ್ತಿದೆ. ಆದರೆ ಫಲ ಮಾತ್ರ ಶೂನ್ಯವಾಗಿದೆ. ಮಧ್ಯವರ್ತಿಗಳ ಹಾವಳಿ ತೀವ್ರವಾಗಿದೆ. ಈ ದೇಶದ ಹಳ್ಳಿಯ ರೈತನನ್ನು ಎಲ್ಲಾ ಸರ್ಕಾರಗಳು ಮರೆಯುತ್ತವೆ. ಗಾಂಧೀಜಿಯವರು ಭಾರತದ ಆತ್ಮ ಹಳ್ಳಿಗಳಲ್ಲಿದೆ. ಹಳ್ಳಿಗಳ ಕಡೆ ಹೆಚ್ಚು ಗಮನ ಕೊಡಬೇಕು. ಗ್ರಾಮೀಣ ಬಂಧುಗಳು ಸರ್ಕಾರದ ಸವಲತ್ತುಗಳನ್ನು ಸದ್ಬಳಕೆ ಮಾಡಿಕೊಳ್ಳಬೇಕು. ಜೂಜು, ಕುಡಿತಕ್ಕೆ ಮನಸೋತು ಮನುಷ್ಯ ಜೀವನ ಹಾಳು ಮಾಡಿಕೊಳ್ಳುತ್ತಿದ್ದಾನೆ. ಈ ಕೆಟ್ಟ ಚಟಗಳಿಂದ ದೂರವಾಗಿ ಕುಟುಂಬವನ್ನು ಚೆನ್ನಾಗಿ ನಡೆಸಿ ಕೊಂಡು ಹೋಗಬೇಕು ಎಂದು ತಿಳಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಶಾಸಕರಾದ ಶ್ರೀ ಎಸ್.ಶಿವಣ್ಣನವರು ವಹಿಸಿದ್ದರು. ತಹಶೀಲ್ದಾರ್ ಶ್ರೀ ಗೋಪಾಲಯ್ಯನವರು ಸ್ವಾಗತಿಸಿದರು. ಅನೇಕ ಜನಪ್ರತಿನಿಧಿಗಳು ಸಭೆಯಲ್ಲಿ ಭಾಗವಹಿಸಿದ್ದರು. ಸಾವಿರದ ನಲವತ್ತೇಳು ಫಲಾನುಭವಿ ಗಳಿಗೆ ವಿವಿಧ ಇಲಾಖೆಗಳಿಂದ ಸವಲತ್ತುಗಳನ್ನು ನೀಡ ಲಾಯಿತು. ಒಟ್ಟಾರೆ ಸುಮಾರು ಮೂರು ಸಾವಿರ ಗ್ರಾಮೀಣ ಬಂಧುಗಳು ಭಾಗವಹಿಸಿದ್ದರು. ಎಲ್ಲರಿಗೂ ಪರಮಪೂಜ್ಯರು ದಾಸೋಹ ವ್ಯವಸ್ಥೆ ಮಾಡಿದ್ದರು.

ವರದಿ : ಡಿ.ಎಸ್. ನಾಗರಾಜು

RNI No. 17139/69

"Siddaganga" Monthly - Postal Reg. No. KA/SK/TMR/385/2006-08

# ದಿನದರ್ಶಿ 2007

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



### ಜನವರಿ

| | | | | | |
|---|---|---|---|---|---|
| ಭಾನು | ❋ | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬುಧ | 3° | 10 | 17 | 24 | 31 |
| ಗುರು | 4 | 11 | 18 | 25 | ❋ |
| ಶುಕ್ರ | 5 | 12 | 19• | 26 | ❋ |
| ಶನಿ | 6 | 13 | 20 | 27 | ❋ |

### ಫೆಬ್ರವರಿ

| | | | | | |
|---|---|---|---|---|---|
| ಭಾನು | ❋ | 4 | 11 | 18 | 25 |
| ಸೋ | ❋ | 5 | 12 | 19 | 26 |
| ಮಂ | ❋ | 6 | 13 | 20 | 27 |
| ಬುಧ | ❋ | 7 | 14 | 21 | 28 |
| ಗುರು | 1 | 8 | 15 | 22 | ❋ |
| ಶುಕ್ರ | 2° | 9 | 16 | 23 | ❋ |
| ಶನಿ | 3 | 10 | 17• | 24 | ❋ |

### ಮಾರ್ಚ್

| | | | | | |
|---|---|---|---|---|---|
| ಭಾನು | ❋ | 4 | 11 | 18 | 25 |
| ಸೋ | ❋ | 5 | 12 | 19• | 26 |
| ಮಂ | ❋ | 6 | 13 | 20 | 27 |
| ಬುಧ | ❋ | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9 | 16 | 23 | 30 |
| ಶನಿ | 3° | 10 | 17 | 24 | 31 |

### ಏಪ್ರಿಲ್

| | | | | | |
|---|---|---|---|---|---|
| ಭಾನು | 1 | 8 | 15 | 22 | 29 |
| ಸೋ | 2° | 9 | 16 | 23 | 30 |
| ಮಂ | 3 | 10 | 17• | 24 | ❋ |
| ಬುಧ | 4 | 11 | 18 | 25 | ❋ |
| ಗುರು | 5 | 12 | 19 | 26 | ❋ |
| ಶುಕ್ರ | 6 | 13 | 20 | 27 | ❋ |
| ಶನಿ | 7 | 14 | 21 | 28 | ❋ |

### ಮೇ

| | | | | | |
|---|---|---|---|---|---|
| ಭಾನು | ❋ | 6 | 13 | 20 | 27 |
| ಸೋ | ❋ | 7 | 14 | 21 | 28 |
| ಮಂ | 1 | 8 | 15 | 22 | 29 |
| ಬುಧ | 2° | 9 | 16• | 23 | 30 |
| ಗುರು | 3 | 10 | 17 | 24 | 31° |
| ಶುಕ್ರ | 4 | 11 | 18 | 25 | ❋ |
| ಶನಿ | 5 | 12 | 19 | 26 | ❋ |

### ಜೂನ್

| | | | | | |
|---|---|---|---|---|---|
| ಭಾನು | ❋ | 3 | 10 | 17 | 24 |
| ಸೋ | ❋ | 4 | 11 | 18 | 25 |
| ಮಂ | ❋ | 5 | 12 | 19 | 26 |
| ಬುಧ | ❋ | 6 | 13 | 20 | 27 |
| ಗುರು | ❋ | 7 | 14 | 21 | 28 |
| ಶುಕ್ರ | 1 | 8 | 15• | 22 | 29 |
| ಶನಿ | 2 | 9 | 16 | 23 | 30° |

### ಜುಲೈ

| | | | | | |
|---|---|---|---|---|---|
| ಭಾನು | ❋ | 5 | 12• | 19 | 26 |
| ಸೋ | ❋ | 6 | 13 | 20 | 27 |
| ಮಂ | ❋ | 7 | 14 | 21 | 28° |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | 31 |
| ಶನಿ | 4 | 11 | 18 | 25 | ❋ |

### ಆಗಸ್ಟ್

| | | | | | |
|---|---|---|---|---|---|
| ಭಾನು | ❋ | 5 | 12• | 19 | 26 |
| ಸೋ | ❋ | 6 | 13 | 20 | 27 |
| ಮಂ | ❋ | 7 | 14 | 21 | 28° |
| ಬುಧ | 1 | 8 | 15 | 22 | 29 |
| ಗುರು | 2 | 9 | 16 | 23 | 30 |
| ಶುಕ್ರ | 3 | 10 | 17 | 24 | 31 |
| ಶನಿ | 4 | 11 | 18 | 25 | ❋ |

### ಸೆಪ್ಟೆಂಬರ್

| | | | | | |
|---|---|---|---|---|---|
| ಭಾನು | 30 | 2 | 9 | 16 | 23 |
| ಸೋ | ❋ | 3 | 10 | 17 | 24 |
| ಮಂ | ❋ | 4 | 11° | 18 | 25 |
| ಬುಧ | ❋ | 5 | 12 | 19 | 26• |
| ಗುರು | ❋ | 6 | 13 | 20 | 27 |
| ಶುಕ್ರ | ❋ | 7 | 14 | 21 | 28 |
| ಶನಿ | 1 | 8 | 15 | 22 | 29 |

### ಅಕ್ಟೋಬರ್

| | | | | | |
|---|---|---|---|---|---|
| ಭಾನು | ❋ | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬುಧ | 3 | 10• | 17 | 24 | 31 |
| ಗುರು | 4 | 11• | 18 | 25 | ❋ |
| ಶುಕ್ರ | 5 | 12 | 19 | 26° | ❋ |
| ಶನಿ | 6 | 13 | 20 | 27 | ❋ |

### ನವೆಂಬರ್

| | | | | | |
|---|---|---|---|---|---|
| ಭಾನು | ❋ | 4 | 11 | 18 | 25 |
| ಸೋ | ❋ | 5 | 12 | 19 | 26 |
| ಮಂ | ❋ | 6 | 13 | 20 | 27 |
| ಬುಧ | ❋ | 7 | 14 | 21 | 28 |
| ಗುರು | 1 | 8 | 15 | 22 | 29 |
| ಶುಕ್ರ | 2 | 9• | 16 | 23 | 30 |
| ಶನಿ | 3 | 10 | 17 | 24° | ❋ |

### ಡಿಸೆಂಬರ್

| | | | | | |
|---|---|---|---|---|---|
| ಭಾನು | 30 | 2 | 9• | 16 | 23 |
| ಸೋ | 31 | 3 | 10 | 17 | 24° |
| ಮಂ | ❋ | 4 | 11 | 18 | 25 |
| ಬುಧ | ❋ | 5 | 12 | 19 | 26 |
| ಗುರು | ❋ | 6 | 13 | 20 | 27 |
| ಶುಕ್ರ | ❋ | 7 | 14 | 21 | 28 |
| ಶನಿ | 1 | 8 | 15 | 22 | 29 |

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087